ಅಗ್ಗ ಸಾಹಿತ್ಯ: ಎರಡು.

# ಕೊಲೆಯ ಕೈ

[ ರೋಮಾಂಚಕಾರಿ ಪತ್ತೇದಾರಿ ಕಾದಂಬರಿ ]



"ಎಚ್ಚಾರ್ಕೆ"
ಬರೆದುದು.



ಕನ್ನಡ ಸಾಹಿತ್ಯ ಪ್ರಕಾಶನ, ಗದಗ.

# ಕೊಲೆಯ ಕೈ

ಮೊದಲ ಮುದ್ರಣ: ಜನೆವರಿ, ೧೯೫೫



ಬೆಲೆ: ಕೇವಲ ಎಂಟಾಣೆ.

ಪ್ರಕಾಶಕಿ ಮತ್ತು ಸಂಪಾದಕಿ:
ಶ್ರೀಮತಿ ಶೀಲಾ ರಾವ್,
ಕನ್ನಡ ಸಾಹಿತ್ಯ ಪ್ರಕಾಶನ,
ಕಿಲ್ಲೆ, ಗದಗ.



ಮುದ್ರಕರು:
ಹ. ಸ. ನಂದಿಗೌಡ್ರ,
ಶಂಕರನಾರಾಯಣೀ ಪ್ರೆಸ್,
ಸ್ಟೇಶನ್ ರೋಡ, ಗದಗ.



ಆನಂದ ಏನೋ ಆಲೋಚನೆ ಮಾಡಿಕೊಂಡು ಗಾಂಧೀ ಬಜಾರ್ ಕಡೆಯಿಂದ ಮಾರ್ಕೆಟ್‌ಗೆ ಅಭಿಮುಖವಾಗಿ ನಡೆದುಕೊಂಡು ಹೋಗುತ್ತಿದ್ದ.

ಅವನು ನಡೆದುಕೊಂಡು ಹೋಗುತ್ತಿದ್ದುದಕ್ಕೂ, ಏನೋ ಆಲೋಚನೆ ಮಾಡಿಕೊಂಡು ಹೋಗುತ್ತಿದ್ದುದಕ್ಕೂ ಕಾರಣಗಳಿದ್ದುವು. ಸಪ್ಪೆಯಾದುದನ್ನು ಮುಗಿಸಿಕೊಂಡು ಸ್ವಾರಸ್ಯವಾದುದರ ಕಡೆಗೆ ತಿರುಗೋಣ. ಅವನು ಮನೆಯಿಂದ ಆಫೀಸಿಗೆ ದಿನವೂ ನಡೆದುಕೊಂಡು ಹೋಗುವುದೇ ಪದ್ಧತಿ. ಆದರಿಂದ ನಡೆದುಕೊಂಡು ಹೋಗುತ್ತಿದ್ದ.

ಮತ್ತೊಂದು ಕಾರಣವೇ ಸ್ವಾರಸ್ಯವಾದುದು ಅಷ್ಟೇ ಅಲ್ಲ. ಆ ಪ್ರಸಂಗಕ್ಕೂ ಈಗ ನಾವು ಹೇಳಲು ಹೊರಟಿರುವ ಕತೆಗೂ ಸ್ವಲ್ಪ ಮಟ್ಟಿಗೆ ಸಂಬಂಧವಿದೆ.

ಅಷ್ಟು ಹೇಳಿದ್ದರಿಂದಲೇ ಮೊದಲನೆಯ ಕಾರಣವನ್ನು ಪೂರ್ಣವಾಗಿ ಹೇಳಿದಂತೆ ಆಗಲಿಲ್ಲ. ಆನಂದನದು ಒಂದು ವಿಚಿತ್ರ ಪ್ರವೃತ್ತಿ, ಬಸ್ಸುಗಳನ್ನು ಕಂಡರೆ ಅವನಿಗಾಗುವುದಿಲ್ಲ. ಸುಖವಾಗಿ ಸಿಗರೇಟು ಸೇದಿಕೊಂಡು ಜಟಕಾದಲ್ಲಿ ಹೋಗಬೇಕು. ಇಲ್ಲದಿದ್ದರೆ ವಾಕೋನೋಬೈಲ್ ಇದ್ದೇ ಇದೆ. ಕಾಸೂ ಉಳಿಯಿತು. ದಾರಿಯೂ ಸವೆಯಿತು.

ಸುಮಾರು ಎಂಟು ಹತ್ತು ದಿನಗಳ ಹಿಂದೆ ಹೀಗೆ ನಡೆದುಕೊಂಡು ಹೋಗುತ್ತಿರಲಿಲ್ಲ. ಜಟಕಾದಲ್ಲಿ ಹೋಗುತ್ತಿದ್ದ.

ಜಟಕಾ ಹೊಡೆಯುತ್ತಿದ್ದ ಸಾಬಿ ತನಗೆ ಬರುತ್ತಿದ್ದ ಅರ್ಧ ಉರ್ದು, ಅರ್ಧ ಕನ್ನಡದಲ್ಲಿ ಮಾಮೂಲು ಗಿರಾಕಿಯಾದ ಆನಂದನಿಗೆ ಹೇಳಿದ.

"ಕಾಲ ಬಹಳ ಕೆಟ್ಟುಹೋಯಿತು, ಸ್ವಾಮಿ"

"ಯಾಕಯ್ಯ, ಏನು ವಿಷಯ ?"

"ಈ ಔರತ್ ಲೋಗ್ ಇದ್ದಾರಲ್ಲ, ಹರಾಂ ಆಗಿಬಿಟ್ಟಿದಾರೆ"

ನಗುತ್ತಾ ಆನಂದ ಕೇಳಿದ.

"ಯಾಕೆ ಹರಾಂ ಆಗಿಪ್ಪಾದೆ?"

"ಇಸ್ಕೂಲು, ಕಾಲೇಜುಗಳು ಹೆಚ್ಚಾದುವು. ಕಾಂಗ್ರೆಸ್ ಸರ್ಕಾರ ಬೇರೇ ಬಂತು."

ಆನಂದ್‌ಗೆ ಬೇಕಾಗಿದ್ದುದು ಅದಲ್ಲ. ಈ ಕಾಲದ ಹೆಂಗಸರನ್ನು ಬೈಯ್ಯುವಂತಹ ಘಟನೆ ಜಟಕಾದ ಸಾಬಿಯ ಜೀವನದಲ್ಲಿ ಏನು ನಡೆಯಿತು —ಎಂಬುದು.

"ವಿಷಯವೇ ಹೇಳದೇ ಏನೋ ಕತೆ ಹೇಳುತ್ತಿದ್ದೀಯಲ್ಲ"

"ಅವಸರಪಡಬೇಡಿ, ಸ್ವಾಮಿ. ನಿದಾನ ತಂದುಕೊಳ್ಳಿ"

ಮೆಲುದನಿಯಲ್ಲಿ ನಿಧಾನವಾಗಿ ಆನಂದ ಕೇಳಿದ

"ಸಾಹೇಬು, ವಿಷಯವೇನು, ಹೇಳು"

"ಮೊನ್ನೆ ಒಂದು ಹುಡುಗಿ ಬಂದು ಗಾಡಿಯಲ್ಲಿ ಕುಳಿತುಕೊಂಡಿತು ಕಾಲೇಜನಲ್ಲಿ ಓದುವ ಹುಡುಗಿ ಎಂದು ಕಂಡುಬರುತ್ತದೆ. ಕಾಲೇಜಿನಲ್ಲಿ ಓದುವುದೇನು, ಸ್ವಾಮಿ, ಫಿಲಂ ಇಸ್ಟಾರ್. ಫಿಲಂ ಇಸ್ಟಾರ್ ಇದ್ದ ಹಾಗಿವೆ, ಎನ್ನಿ. ನಾನು ಹೀಗೆ ಹೇಳುತ್ತೇನೆ. ಅಂದುಕೊಳ್ಳಬೇಡಿ ನಿಮ್ಮ ಜನ ಇದ್ದಾರಲ್ಲ, ಅವರಿಗೆ ಅಕ್ಕಲ್ ಇಲ್ಲ— ಹೆಂಗಸರನ್ನು ಮೊದಲು ಗಾಡಿಯಲ್ಲಿ ಕೂರಿಸಿ ಕಡೆಯಲ್ಲಿ ಕಾಲು ಬಿಟ್ಟುಕೊಂಡು ಕೂತುಕೊಳ್ಳುತ್ತಾರೆ ಹರಾಂ ಹುಡುಗರು ಏನು ಮಾಡುತ್ತಾರೆ, ಗೊತ್ತೆ? ಮುಂದೆ ಬನ್ನಿ ಅಮ್ಮ, ಹಿಂದೆ ಹೋಗಿ ಅಮ್ಮ ಎಂದು ಹೇಳುತ್ತಾ ಗಾಡಿ ಹೊಡೆಯುವ ನೆಪಮಾಡಿ ತಮ್ಮ ಮುಂಗೈಯ್ಯಿಗಳಿಂದ ಹೆಂಗಸರ ಮೈ ತಿವಿಯುತ್ತಾರೆ

ಎಲ್ಲಿಯೋ ಹೊರಟ ಕತೆ ಎಲ್ಲಿಗೋ ಬಂದಿತ್ತು. ಆನಂದ ಬೇಜಾರು ಮಾಡಿಕೊಂಡವನಂತೆ ಕೇಳಿದ.

"ಆ ಫಿಲಿಂ ಸ್ಟಾರ್ ಇದ್ದ ಹಾಗೆ ಇದ್ದಳಲ್ಲ, ಆ ಹುಡುಗಿ ವಿಷಯ ಹೇಳಯ್ಯ"

"ಅದೇ ಹೇಳುತ್ತಿದ್ದೇನೆ, ಸ್ವಾಮಿ. ಮೊಳಕೈಯಲ್ಲಿ ಮೈ ತಿವಿಯುತ್ತಾರಲ್ಲ, ಅಂತಹ ಬೇಇಜ್ಜತ್ ನಾನಲ್ಲ. ಅದೇ ಕೇಳಿ ನಾನು ಗಾಡಿ

ಹೊಡೆಯುತ್ತಿದ್ದರೆ ಆ ಹುಡುಗಿ ಮುಂದೆ ಮುಂದೆ ಬಂತು. ನಾನು "ಹಿಂಬಾರ ಮುಂದೆಬನ್ನಿ, ಅಮ್ಮ" ಅನ್ನಲಿಲ್ಲ. ಅವಳೇ ಮುಂದೆ ಬಂದಳು. ಮೈಗೆ ಮೈ ತಗಲುವಂತೆ ಕುಳಿತುಕೊಂಡು, ತನ್ನ ಅಂಗೈಯನ್ನು ತೊಡೆಯ ಮೇಲೆ ಹೊಡೆದು "ನೀನು ಬಹಳ ಚೆನ್ನಾಗಿ ಗಾಡಿ ಹೊಡೆಯುತ್ತೀಯೇ, ಸಾಹೇಬು" ಎಂದನು

ಆ ಹುಡುಗಿ ತನ್ನ ತೊಡೆಯ ಮೇಲೆಯೇ ಕೈ ತೆಗೆದು ಹೊಡೆದಂತಾಯಿತು. ಆನಂದನಿಗೆ, ಬಾಯಲ್ಲಿ ಜೊಲ್ಲು ತಂದುಕೊಂಡು ಹೇಳಿದ

"ಸ್ವಾರಸ್ಯವಾಗಿದೆ, ಬಹಳ ಸ್ವಾರಸ್ಯವಾಗಿದೆ. ಆ ಮೇಲೆ?"

"ಆಮೇಲೆ ಏನು, ಸ್ವಾಮಿ, "ಇಳಿ, ಮೊದಲು ಗಾಡೀ ಇಳಿ," ಎಂದು ಹೇಳಿ ಇಳಿಸಿಬಿಟ್ಟೆ"

ಕತೆಯ ಸ್ವಾರಸ್ಯ ಕೆಟ್ಟುಹೋಯಿತು. ಆದರೂ ಒಂದು ಸಮಾಧಾನ ಫಿಲಿಂಸ್ಟಾರ್ ಅಂತಹ ಹುಡುಗಿ ಜಟಕಾ ಸಾಬಿ ರಖಾವ್ ಆಗಲಿಲ್ಲವಲ್ಲ ಎಂದು.

"ಅದೇಕೆ ಇಳಿಸಿಬಿಟ್ಟೆ?"

"ಎಲ್ಲಾದರೂ ಉಂಟಾ ಸ್ವಾಮಿ. ನಾನು ದೋ ಔರತ್, ಚಾರ್ ಬಚ್ಚೆ. ಏಕ್ ಕುತ್ತೇ ಸಾಕಬೇಕು, ಸಂಸಾರಿ ಆಧಮೀ ಇದ್ದೀನಿ. ಈ ರಂಡೀ ಕರೆಯುತ್ತಾಳೆಂದು ಅವಳ ಜೊತೆಯಲ್ಲಿ ಹೋದರೆ ನಿಮ್ಮಂತಹವರು ಮುಖದ ತುಂಬಾ ಉಗಿಯುವುದಿಲ್ಲವೇ?"

"ಇಳಿಸಿಯೇ ಬಿಟ್ಟೆಯಾ?"

"ಓ. ಮುಖ ಮೂತಿ ನೋಡದೇ ಇಳಿಸಿಬಿಟ್ಟೆ"

"ಅವಳನ್ನು ಎಲ್ಲಿ ಇಳಿಸಿದೆ, ಸಾಹೇಬು"

"ಮಾರ್ಕೆಟ್ಟಿಗೆ ಹೋಗುವ ದಾರಿಯಲ್ಲಿ"

ಎಂಥಾ ಕೆಲಸವಾಯಿತು. ಫಿಲಂಸ್ಟಾರ್‌ನಂತಹ ಹುಡುಗಿಯನ್ನು ಇಳಿಸಿಬಿಟ್ಟಿದ್ದಾನೆ. ಮಾರ್ಕೆಟ್ಟಿನ ದಾರಿಯಲ್ಲಿ ಎಲ್ಲಿ ಅವಳನ್ನು ಹುಡುಕುವುದು ?

ಕತೆ ಕೇಳಿದ್ದರಿಂದ ಉಪಯೋಗವಾಗಲಿಲ್ಲ. ಆನಂದ ನಿಟ್ಟುಸಿರು ಬಿಟ್ಟು ಸಪ್ಪಗೆ ಕುಳಿತುಬಿಟ್ಟ.

ತಾನು ಇಷ್ಟುಹೊತ್ತು ಕತೆ ಹೇಳಿಯೂ ಉಪಯೋಗವಿಲ್ಲವೇನೋ ಎಂದು ಸಾಬಿ ಆಲೋಚನೆ ಮಾಡಿ ಕಡೆಯ "ತುರುಪು ಎಲೆ" ಇಳಿಸಿದ.

"ಏನು ಯೋಚನೆ ಮಾಡುತ್ತೀರಿ, ಸ್ವಾಮಿ"

"ಹೀಗಾದ ಮೇಲೆ ಅವಳು ಎಲ್ಲಿಯೂ ಸಿಕ್ಕಲಿಲ್ಲವೇ?"

"ಸಿಕ್ಕದೇ ಏನು, ಸಿಕ್ಕುತ್ತಾಳೆ"

ಒಣಗಿ ಹೋಗಿದ್ದ ಕುಡಿ ಚಿಗುರುವಂತಿದೆ.

"ಎಲ್ಲಿ ಸಿಕ್ಕುತ್ತಾಳೆ?"

"ಮನೆಯಲ್ಲಿ"

"ಅವಳ ಮನೆಯು ಗೊತ್ತೆ?"

"ಗೊತ್ತು"

"ಮನೆಗೆ ಕರೆದುಕೊಂಡು ಹೋಗಿ ಬಿಡಲಿಲ್ಲ. ಬೀದಿಯಲ್ಲಿಯೇ ಇಳಿಸಿ ಬಿಟ್ಟೆ ಎಂದೆಯಲ್ಲಾ"

"ಆದರೂ ಮನೆ ಗೊತ್ತು, ಸ್ವಾಮಿ. ಯಾವುದೋ ಬಾಡಿಗೆಗೆ ಹೋಗಿದ್ದವನು ಖಾಲೀ ಬರುತ್ತಿದ್ದೆ, ಆಗ ಮನೆ ಮುಂದೆ ನಿಂತು ಗಾಡಿ ಕರೆದಳು. ಕೂರಿಸಿಕೊಂಡು ಮಾರ್ಕೆಟ್ಟಿಗೆ ಬರುತ್ತಿರುವಾಗ ನಾನು ಇಳಿಸಿ ಬಿಟ್ಟೆದ್ದು"

"ಸರಿ, ಹಾಗಾದರೆ ಅವಳ ಮನೆ ಎಲ್ಲಿ?"

"ಮಾಗಡೀ ರೋಡಿನಲ್ಲಿ"

"ನನಗೆ ಅವಳನ್ನು ಒಂದು ಸಾರಿ ತೋರಿಸುತ್ತೀಯಾ?"

"ತೋರಿಸುವುದೇನು? ಬೇಕಾದರೆ ಹೇಳಿ, ನಿಮಗಿಬ್ಬರಿಗೂ ಮಿಲಾಯಿಸಿ ಕೊಡುತ್ತೇನೆ"

"ಮಿಲಾಕತ್ತಿನ ಮಾತು ಆಮೇಲೆ. ಮೊದಲು ಅವಳನ್ನು ಒಂದು ಸಾರಿ ನೋಡಬೇಕು"

"ಹಾಗಾದರೆ ಸಾಯಂಕಾಲ ಕರೆದುಕೊಂಡು ಬರಲೆ?"

ಸಾಹೇಬು ಫಿಲಿಂಸ್ಟಾರನ್ನು ಕರೆದುಕೊಂಡು ಬರುವವರೆವಿಗೆ ಬಂದಿದ್ದಾನೆ ಬಂದು ಬಿಡುತ್ತಾಳೆ ಆದರವಳನ್ನು ಎಲ್ಲಿಗೆ ಕರೆಸುವುದು? ಕಕ್ಷಿಗಾರಳು ಎಂಬ ನೆವದಿಂದ ಆಫೀಸಿಗೆ ಕರೆಸಬಹುದು. ಆದರೆ ಆ ಚಾಣಾಕ್ಷ

ಗುಮಾಸ್ತ ವಿಷಯ ಪತ್ತೆ ಮಾಡಿಬಿಡುತ್ತಾನೆ. ತನ್ನ ಮನೆಗಂತೂ ಕರೆಸು ವಂತೆಯೇ ಇಲ್ಲ. ಅಪ್ಪ ಅಮ್ಮ, ಅಣ್ಣ ತಮ್ಮ, ಅಕ್ಕ ತಂಗಿ ಮನೆಯಲ್ಲ ಗಿಜಗಿಜನೆ ತುಂಬಿಕೊಂಡಿರುತ್ತಾರೆ.

"ಅವಳ ಮನೆಗೆ ಹೋದರೆ ?"

"ಅಯ್ಯೋ! ಅಲ್ಲಿ ಆಗುವುದಿಲ್ಲ. ಅವಳು ಅಣ್ಣನ ಮನೆಯಲ್ಲಿದ್ದಾಳೆ. ಅಣ್ಣ ಬೆಳಗಾಗ ಎದ್ದವನು ಕೆಲಸಕ್ಕೆ ಹೋದರೆ ವಾಪ್ಸ ಬರುವುದು ಸಾಯಂ ಕಾಲ. ಆದರೂ ಮನೆಯಲ್ಲಿ ಅಣ್ಣನ ಹೆಂಡತಿ ಅತ್ತಿಗೆ ಇದ್ದಾಳೆ. ಅವಳಿಗೂ ಇವಳಿಗೂ ಬಹಳ ದುಸ್ಮರ್"

"ಸರಿ, ಯಾವುದಾದರೂ ಹೋಟಲಿನಲ್ಲಿ ರೂಂ ಮಾಡುತ್ತೇನೆ. ಅಲ್ಲಿಗೆ ಕರೆದುಕೊಂಡು ಬಾ"

"ಉಹುಂ, ಸಾಫ್ ಸೀದಾ ಹೇಳಿ ಬಿಡುತ್ತೇನೆ, ಕೇಳಿ. ಅದು ಬಹಳ ಒಳ್ಳೆಯ ಹುಡುಗಿ. ಟೈಪ್ ಹೊಡೆಯುತ್ತಾರಲ್ಲ. ಆ ಕೆಲಸ ಎಲ್ಲಿಯೋ ಮಾಡಿಕೊಂಡು ಇದ್ದಳು. ಕೆಲಸ ಹೋಗಿ ಗತಿ ಇಲ್ಲದೇ ಅಣ್ಣನ ಮನೆ ಸೇರಿದ್ದಾಳೆ. ನಾನು ಹೇಳಿದಂತೆ ಅವಳಿಗೂ ಅವಳ ಅತ್ತಿಗೆಗೂ ಜಗಳ. ಅಲ್ಲಿರಲಾರೆ ಎಂದು ಗೋಳಿಡುತ್ತಾಳೆ. ಯಾರಾದರೂ ಸರಿಯಾದವರು ಸಿಕ್ಕಿದರೆ ಹೇಳು. ಮಾನವಾಗಿ ಇದ್ದುಬಿಡುತ್ತೇನೆ ಎಂದಳು. ನಾನೂ ನೋಡಿದೆ. ತಾವೇ ಸರಿ ಎಂದು ನಿಮಗೆ ಹೇಳಿದೆ"

"ತೊಡೆಯ ಮೇಲೆ ಕೈ ಹೊಡೆದಳು-ಎಂದ"

ಸಾಬಿ ನಗುತ್ತಾ ಸಮಾಧಾನವನ್ನು ಹೇಳಿದ.

"ಅದೆಲ್ಲಾ ಝೂಟಾ, ಸಾಮಿ, ನಿಮ್ಮ ಮನಸ್ಸು ಹೇಗಿದೆಯೋ ನೋಡೋಣವೆಂದು ಹೇಳಿದೆ.

ಎಷ್ಟು ಬುದ್ಧಿವಂತ ಸಾಬಿ.

"ಎಂಟು ಎಂಟೂವರೆಯ ಹೊತ್ತಿಗೆ ಎಲ್ಲಿಗೆ ಕರೆದುಕೊಂಡು ಬರುತ್ತೀ ಹೇಳು"

"ಅಷ್ಟು ಹೊತ್ತಿಗೆಲ್ಲಿ ಆಗುತ್ತದೆ, ಸಾಮಿ. ಸಿನಿಮಾಗೆ ಹೋಗುತ್ತೀ ನೆಂದು ಹೇಳಿ ಬರಬೇಕು. ಒಂಬತ್ತು ಗಂಟೆ ವೇಳೆಗೆ ಮನೆ ಸೇರಿಕೊಳ ಬೇಕು

ಚಿನ್ನದಂತಹ ಹುಡುಗಿ ಸಿಕ್ಕುವಾಗ ಒಂದು ದಿನ ಆಫೀಸಿಗೆ ಹೋಗ ದಿದ್ದರೇನಂತೆ! ಗುಮಾಸ್ತ ಶಾಸ್ತ್ರಿ ನೋಡಿಕೊಳ್ಳುತ್ತಾನೆ.

"ಸರಿಯಪ್ಪ, ಸಿನಿಮಾಗೆ ಹೋಗುತ್ತೇನೆಂದು ಹೇಳಿ ಬರಲಿ. ಹುಡುಗಿ ಯನ್ನು ಒಂದು ಬಾರಿ ನೋಡುತ್ತೇನೆ"

"ನನ್ನನ್ನು ಮರೆಯಬೇಡಿ"

"ಎಲ್ಲಿಯಾದರೂ ಉಂಟೆ? ನಿನ್ನನ್ನು ಮರೆಯುತ್ತೇನೆಯೇ!"

"ಹಾಗಲ್ಲ ಸ್ವಾಮಿ, ನೀವು ನೀವು ಮಿಲಾಕತ್ ಆಗುವ ಸಂತೋಷದಲ್ಲಿ ನನ್ನ ಮರೆತೀರಿ, ಅಂತ ಹೇಳಿದೆ"

"ಮರೆಯುವುದಿಲ್ಲ. ನಿನ್ನನ್ನು ಸರಿಯಾಗಿ ನೋಡಿಕೊಳ್ಳುತ್ತೇನೆ. ಈಗ ಸದ್ಯದಲ್ಲಿ ಐದು ರೂಪಾಯಿ ಖರ್ಚಿಗೆ ಇಟ್ಟುಕೋ. ಸಾಯಂಕಾಲ ಏನಾದರೂ ಮಾಡಿ ಅವಳನ್ನು ಕರೆದುಕೊಂಡು ಬಾ ಮರೆತುಬಿಟ್ಟೀಯೆ?"

ಸಾಬಿ ಮರೆಯಲಿಲ್ಲ ಆನಂದ್ ಮಾರ್ಕೆಟ್ ಬಳಿ ಕಾದು ನಿಂತಿ ದ್ದಂತೆಯೇ ಆರು ಗಂಟೆಗೆ ಸಾಬಿಯ ಕುದುರೆ ಗಾಡಿ ಮಾರ್ಕೆಟ್ಟಿನ ಒಳಗೆ ಬಂದಿತು. ಸಾಬಿ ಸುಳ್ಳು ಹೇಳಿರಲಿಲ್ಲ. ಗಾಡಿಯಲ್ಲಿ ಒಬ್ಬ ಯುವತಿ ಇದ್ದಳು.

ಆನಂದ್ ಅವಳನ್ನು ನೋಡಿದ. ತಾನು ನೋಡುತ್ತಿರುವುದು ಸ್ವಪ್ನ ದಲ್ಲಿಯೋ ಜಾಗೃತಾವಸ್ಥೆಯಲ್ಲಿಯೋ ಎಂದು ಕಣ್ಣುಜ್ಜಿಕೊಂಡ ನೋಡಿದ ತನ್ನ ಮೈ ಚಿಗುಟಿಕೊಂಡು ನೋಡಿದ. ಸಂದೇಹವೇ ಇಲ್ಲ. ಚಕ್ಕರನಾಗಿದ್ದಾನೆ ಆ ಹುಡುಗಿ; ಸುಂದರಿಯಷ್ಟೇ ಅಲ್ಲ. ಸುರಸುಂದರಿ.

ಸಾಬಿಯ ಕಣ್ಣು ಸನ್ನೆಯ ಸುಳಿವನ್ನು ಅರ್ಥ ಮಾಡಿಕೊಂಡು ಆನಂದ್ ಗಾಡಿಯನ್ನು ಹತ್ತಿ ಕುಳಿತ. ಯುವತಿ ಸ್ವಲ್ಪ ಸರಿದು ಅವನು ಸರಿಯಾಗಿ ಕುಳಿತುಕೊಳ್ಳಲು ಎಡೆ ಮಾಡಿಕೊಟ್ಟಳು.

ಗಾಡಿಯವನು ಕೇಳಿದ.

"ಎಲ್ಲಿ ಹೊಡೆಯಲಿ ಸಾಮಿ"

ಆನಂದ್ ಹುಡುಗಿಯ ಕಡೆ ತಿರುಗಿ ಅಂದ

"ಎಲ್ಲಿಗೆ ಹೋಗೋಣ"

ಎಲ್ಲಿ ಬೇಕಾದರೂ ಹೋಗೋಣ"

ಅವನ ಮೇಲೆ ಭಾರ ಹಾಕಿಬಿಟ್ಟಳು. ಈಗೆಲ್ಲಿ ಹೋಗುವುದು ? ಎಲ್ಲಿ ಹೋಗುವುದಕ್ಕೂ ಹೊತ್ತಾಗಿಲ್ಲ. ಇನ್ನೂ ಬೆಳ್ಳಗೆ ಬೆಳಕಿದೆ. ಅವಳ ಕಡೆಯವರ ಕಣ್ಣಿಗೆ ಬೀಳಬಹುದು. ಅವನ ಸ್ನೇಹಿತರ ಅಥವಾ ಮನೆಯವರ ಕಣ್ಣಿಗೆ ಬೀಳಬಹುದು. ಯಾವುದಕ್ಕೂ ಕತ್ತಲಾಗುವವರೆವಿಗೆ ಕಾದರೆ ಒಳ್ಳೆಯದಲ್ಲವೇ ?

"ನೀವು ಸಿನಿಮಾಗೆ ಹೋಗಿಬರುತ್ತೇನೆಂದು ಮನೆಯಲ್ಲಿ ಹೇಳಿಬಂದಿದ್ದೀರಲ್ಲವೇ ?"

"ಹೌದು"

"ಹಾಗಾದರೆ ಸ್ವಲ್ಪ ಹೊತ್ತು ಯಾವುದಾದರೂ ಥಿಯೇಟರಿಗೆ ಹೋಗಿ ಕುಳಿತುಕೊಳ್ಳೋಣ. ಆ ಮೇಲೆ ಎಲ್ಲಿ ಹೋಗುವುದೆಂದು ಆಲೋಚನೆ ಮಾಡೋಣ"

"ಹಾಗೇ ಆಗಲಿ"

ಗಾಡಿ ಪ್ರಭಾತ್ ಥಿಯೇಟರಿನ ಬಳಿ ಹೋಯಿತು. ಗಾಡಿ ಇಳಿಯುತ್ತಿದ್ದಂತೆ ಯುವತಿ ಬಾಡಿಗೆ ಕೊಡಲು ವ್ಯಾನಿಟೀ ಬ್ಯಾಗ್ ತೆಗೆದಳು. ಅಷ್ಟರಲ್ಲಿ ಆನಂದ್ ನೋಟಿನ ಕಂತೆ ತೆಗೆದು ಐದು ನೋಟುಗಳನ್ನು ಕಿತ್ತು ಕೊಟ್ಟು "ಸರಿ. ನಾಳೆ ನೋಡೋಣ" ಎಂದ.

ಆ ದಿನ ಮಧ್ಯಾಹ್ನ ಇರಲಿ ಎಂದು ಬ್ಯಾಂಕಿನಿಂದ ನೂರು ರೂಪಾಯಿ ತಂದಿದ್ದ. ನೂರು ಹೊಸ ರೂಪಾಯಿ ನೋಟುಗಳನ್ನು ಹೀಗೆ ಮಾಡಿದ್ದ ಕಂತೆಯನ್ನು ತಂದಿದ್ದ.

ಒಳಗೆ ಹೋಗಿ ಬಾಕ್ಸ್‌ನಲ್ಲಿ ಕುಳಿತು ಇಬ್ಬರೂ ಚಿತ್ರ ನೋಡತೊಡಗಿದರು.

ಒಂದು ಗಂಟೆಯ ಹೊತ್ತು ಸಿನಿಮಾ ನೋಡುತ್ತಿದ್ದು ಆ ಸುಂದರಿ ಹೇಳಿದಳು.

"ಫಿಲಿಂ ಚೆನ್ನಾಗಿಲ್ಲ. ಬೇಜಾರಾಗುತ್ತದೆ. ನೀವು ಪೂರಾ ನೋಡಬೇಕಾದರೆ ನೋಡೋಣ"

"ಬೇಡ. ಎದ್ದು ಹೊರಟುಹೋಗೋಣ"

ಎದ್ದು ಬಂದರು. ಹೊರಗಡೆ ಚೆನ್ನಾಗಿ ಕತ್ತಲಾಗಿತ್ತು. ಬೀದಿಯಲ್ಲಿಯೂ, ಕಟ್ಟಡಗಳಲ್ಲಿಯೂ ವಿದ್ಯುಚ್ಛಕ್ತಿಯ ದೀಪಗಳು ಪ್ರಕಾಶಿಸುತ್ತಿದ್ದವು. ಕೆಂಪೇಗೌಡ ರಸ್ತೆಯಲ್ಲಿ ನಡೆದುಕೊಂಡು ಹೊರಟರು. ದಾರಿಯಲ್ಲಿ ಬಲಗಡೆ ಆಟೋ ರಿಕ್ಷಾಗಳು ನಿಂತಿದ್ದವು. ರಿಕ್ಷಾ ಕರೆಯೋಣವೇ ಎನ್ನಿಸಿತು. ಇಂಥಾ ಹುಡುಗಿಯನ್ನು ರಿಕ್ಷಾ ಹತ್ತು ಎಂದರೆ ಏನೆನ್ನುತ್ತಾಳೆ? ಬೇಡ. ಇನ್ನಷ್ಟು ದೂರ ನಡೆದು ಸುಬೇದಾರ್ ಚತ್ರದ ರಸ್ತೆಯ ಟ್ಯಾಕ್ಸೀ ಸ್ಟಾಂಡಿಗೆ ಬಂದರು. ಚೆನ್ನಾಗಿದ್ದ ದೊಡ್ಡ ಟ್ಯಾಕ್ಸಿಯನ್ನು ಕರೆದು ಅವಳನ್ನು ಹತ್ತಿಸಿ, ತಾನೂ ಹತ್ತಿ ಸೌತ್ ಪೆರೇಡಿನ ಕಡೆ "ಬಿಡು" ಅಂದ.

ಟ್ಯಾಕ್ಸೀ ವೇಗವಾಗಿ ಹೊರಟಿತು.

'ಸ್ವಲ್ಪ ನಿಧಾನವಾಗಿ ಬಿಡು"

ಗಾಡಿಯು ವೇಗ ಕಡಿಮೆಯಾಗುತ್ತಲೇ ಪಕ್ಕದಲ್ಲಿ ಕುಳಿತಿದ್ದ ಹುಡುಗಿಯನ್ನು ಕೇಳಿದ.

"ನೀವು ಏನಾದರೂ ತೆಗೆದುಕೊಳ್ಳುವುದುಂಟೆ ?"

ಅವಳು ನಗುತ್ತಾ "ಏನಾದರೂ ಎಂದರೆ ?'' ಅಂದಳು.

"ಏನಾದರೂ ಪ್ರೈಸ್ ಗಿರ್ಯ"

"ನೀವು ಹೇಗೆ ಹೇಳಿದರೆ ಹಾಗೆ"

ಪಿಂಕ್ಸ್‌ಗೆ ಹೋಗಿ ಟ್ಯಾಕ್ಸಿಯವನಿಗೆ ಬಾಡಿಗೆ ಕೊಟ್ಟು ಕಳಿಸಿಬಿಟ್ಟ.

ಇಬ್ಬರೂ ತೋಟದಲ್ಲಿ ನಡೆದುಕೊಂಡು ಹೊರಟರು.

ಆನಂದ್ ಪಕ್ಕದಲ್ಲಿ ಬರುತ್ತಿದ್ದ ಹುಡುಗಿಯನ್ನು ನೋಡಿದ.

ಅಲ್ಲಿ ಮಂದಪ್ರಕಾಶವಿದ್ದರೂ ಅವಳನ್ನು ನೋಡುವಷ್ಟು ಬೆಳಕಿತ್ತು. ಜರೀ ಕೆಲಸ ಮಾಡಿದ ನವುರಾದ ಮಾಸಲು ಬಣ್ಣದ ಸೀರೆ ಉಟ್ಟಿದ್ದಾಳೆ. ಬಣ್ಣದ ರವಿಕೆ ತೊಟ್ಟಿದ್ದಾಳೆ. ಸೀರೆ ಕಟ್ಟಿರುವ ಸುತ್ತಿನ ಬಳಿ ನೋಡಿದರೆ ಸಣ್ಣ ಸೊಂಟದ ಮೇಲ್ಭಾಗ ಸೆರಗು ಹೊದ್ದಿದ್ದರೂ ಕಂಡುಬರುತ್ತದೆ ರವಿಕೆಯಿರುವುದು ಅದರ ಮೇಲುಗಡೆಯಲ್ಲಿ.

ಬಳುಕಿಕೊಂಡು ನಡೆಯುವ ಅವಳೊಡನೆ ನಡೆದುಕೊಂಡು ಹೋಗುವುದೂ ಒಂದು ಹೆಮ್ಮೆ.

ಪಿಂಕ್ಸ್ ಕಂಟೋನ್ಮೆಂಟಿನಲ್ಲಿ ಒಳ್ಳೆಯ ಬಾರು. ವಿಶಾಲವಾದ ಉದ್ಯಾನ. ನಡುವೆ ದೊಡ್ಡ ಬಂಗಲೆ. ಪಕ್ಕದಲ್ಲಿ ಸಣ್ಣ ಕುಠೀರ. ಅದರ ಜಗುಲಿಯ ಮೇಲೆಯೇ ಆನಂದ್ ಸಾಧಾರಣವಾಗಿ ಕುಳಿತುಕೊಳ್ಳುತ್ತಿದ್ದುದು.

ಅಲ್ಲಿಗವಳನ್ನು ಕರೆದುಕೊಂಡು ಹೋದ. ಜಗುಲಿಯ ಮೂರು ಮೆಟ್ಟಿಲುಗಳನ್ನು ಹತ್ತಿ ಹಾಕಿಕೊಂಡಿದ್ದ ಹೈ ಹೀಲ್ಡ್ ಷೂಗಳಿಂದ ಕಟಕಟನೆ ಶಬ್ದ ಮಾಡುತ್ತಾ ಅವನೊಂದಿಗೆ ನಡೆದುಕೊಂಡು ಹೋದಳು.

ಕುಳಿತುಕೊಂಡನಂತರ ಬಂದು ನಿಂತ ಬಾಯ್‌ನನ್ನು ಕುರಿತು "ಇವರಿಗೆ ವೈನ್. ನನಗೆ ಬ್ರಾಂದೀ ತೆಗೆದುಕೊಂಡು ಬಾ" ಎಂದ.

"ಅವಳು ವೈನ್ ಬೇಡ. ನನಗೂ ಬ್ರಾಂದಿಯನ್ನೇ ತಾ" ಎಂದಳು.

ಬ್ರಾಂದೀ ಬರುವವರೆವಿಗೆ ಅವರು ಪರಸ್ಪರ ನೋಡುತ್ತಿದ್ದರು. ಮತ್ತೊಬ್ಬರ ಕಣ್ಣು ತಪ್ಪಿಸಿ ಕದ್ದು ನೋಡುತ್ತಿದ್ದರು.

ಅವಳದು ಚಂದ್ರನಂತಹ ಮುಖಬಿಂಬ. ನಕ್ಷತ್ರಗಳಂತಹ ಕಣ್ಣುಗಳು. ಮೋಡಗಳಂತಹ ಮುಂಗುರುಳು. ಬೆಳದಿಂಗಳಿನಂತಹ ಮಂದಹಾಸ.

ಪೌಡರ್ ಬಳಿದುಕೊಂಡಿದ್ದಳು. ಹುಬ್ಬು ತಿದ್ದಿದ್ದಳು. ತುಟಿಗೆ ಬಣ್ಣ ಹಚ್ಚಿಕೊಂಡಿದ್ದಳು.

ಈ ಕೃತ್ರಿಮ ಸೌಂದರ್ಯವಿಲ್ಲದಿದ್ದರೆ ಮತ್ತಷ್ಟು ಚೆನ್ನಾಗಿ ಕಂಡು ಬರುತ್ತಿದ್ದಳಲ್ಲವೇ ಎಂದುಕೊಂಡ. ಇಲ್ಲ. ಅವಳ ವೈಯ್ಯಾರಕ್ಕೆ ಆ ವೇಷ ಭೂಷಣಗಳು ಬೇಕು. ಆ ವೇಷ ಭೂಷಣಗಳಿಗೆ ಕೃತ್ರಿಮವಾದರೂ ಆ ಅಲಂಕಾರಗಳು ಬೇಕು.

ಬೇರರ್ ಎರಡು ಗ್ಲಾಸುಗಳಲ್ಲಿ ಬ್ರಾಂದಿ ತಂದಿಟ್ಟು ಸೋಡಾ ಸುರಿದು ಹೊರಟುಹೋದ.

ಅವಳು ಮೇಜವನ್ನು ಒರಗಿ ಕುಳಿತಿದ್ದಳು. ಮುಂದೆ ಮಧು ಪಾತ್ರೆಯಿತ್ತು:

ಮುಂದೆ ಮಧು ಪಾತ್ರೆ. ಅದರ ಹಿಂದೆ ಚೆಂಡುಗಳಂತೆ ನಿಂತ ಕುಚಗಳು. ಇನ್ನೂ ಮೇಲೆ ಮಂದಹಾಸವನ್ನು ಬೀರುತ್ತಿರುವ ತುಟಿಗಳು ಚುಂಬಿಸುವುದಕ್ಕಾಗಿಯೇ ಮಾಡಲ್ಪಟ್ಟಿದೆ ಏನೋ ಎಂಬಂತಿರುವ ತುಟಿಗಳು.

ನೋಡುವುದರಲ್ಲಿಯೇ ತಲ್ಲೀನನಾದ ಆನಂದ ಮುಂದಿದ್ದ ಗ್ಲಾಸನ್ನೇ ಮರೆತುಬಿಟ್ಟ.

"ಯಾಕೆ ಕುಡಿಯುದೇ ಸುಮ್ಮನೆ ಕುಳಿತಿದ್ದೀರಿ ?"

ಬೆಚ್ಚಿ ಬಿದ್ದು, ಗ್ಲಾಸ್ ತೆಗೆದು ಕುಡಿದ. ಅವಳೂ ಕುಡಿದಳು. ಇಬ್ಬರೂ ಕುಡಿದರು.

ಹೆಚ್ಚಾಗಿ ಕುಡಿದನಂತರ ಅವಳು ತನ್ನ ವಿಷಯವನ್ನೆಲ್ಲಾ ಹೇಳಿದಳು.

ಅವಳ ಹೆಸರು ವಿಮಲೆ. ಷಾರ್ಟ್ ಹ್ಯಾಂಡ್ ಟೈಪಿಂಗ್ ಪಾಸಾಗಿದೆ. ರೇಷನ್ ಇದ್ದಾಗ ಫುಡ್ ಡಿಪಾರ್ಟ್‌ಮೆಂಟಿನಲ್ಲಿ ತಾತ್ಕಾಲಿಕ ಕೆಲಸವಿತ್ತು. ಅದು ಹೋಯಿತು ಕೆಲಸಕ್ಕಾಗಿ ಎಷ್ಟೋ ಪ್ರಯತ್ನ ಮಾಡಿದಳು. ಸಿಕ್ಕಲಿಲ್ಲ. ಅಣ್ಣನ ಮನೆಯಲ್ಲಿದ್ದಾಳೆ. ನರಕದಲ್ಲಿದ್ದ ಹಾಗೆ ಇದ್ದಾಳೆ. ತಾನು ಚೆನ್ನಾಗಿದ್ದಾಗ ಅಂದರೆ ಅಪ್ಪ ಬದುಕಿದ್ದು ಆತನಿಗೆ ಪೆನ್ಷನ್ ಬರುತ್ತಿದ್ದಾಗ ಮಹಾರಾಣೀ ಕಾಲೇಜ್‌ಗೆ ಹೋಗುತ್ತಿದ್ದಳು. ನಾಲ್ಕು ಮಂದಿ ಹುಡುಗಿಯರು ಬಂದು ಜಟಕಾ ಗಾಡಿಯಲ್ಲಿ ಹೋಗುತ್ತಿದ್ದರು. ಆಗ ಕಾಲೇಜಿಗೆ ಕರೆದುಕೊಂಡು ಹೋಗುತ್ತಿದ್ದವನು ಈ ಸಾಬಿಯೇ. ಅಂದಿನಿಂದ ಅವಳನ್ನು ಬಲ್ಲ "ಒಳ್ಳೆಯವರೊಬ್ಬರಿದ್ದಾರೆ. ಅವರು ಕೆಲಸ ಕೊಡಿಸುತ್ತಾರೆ" ಎಂದು ಹೇಳಿ ಕರೆದುಕೊಂಡು ಬಂದ. ಅದರಿಂದ ಬಂದಳು

ಈ ತರಹನೇ ಮಾತನಾಡುತ್ತಾಳೆ. ಕಷ್ಟವೆನ್ನುತ್ತಾಳೆ. ಸಹಾಯ ಮಾಡಬೇಕೆನ್ನುತ್ತಾಳೆ. ಅವಳನ್ನು ಯಾವ ಉದ್ದೇಶದಿಂದ ಆನಂದ ಕರೆಸಿದನೋ ಆ ಮಾತನ್ನೇ ಆಡುವುದಿಲ್ಲ. ಸ್ವಲ್ಪ ಆ ರೀತಿ ಮಾತನಾಡಿದರೆ ಒಳಗಿರುವ ರೂಮುಗಳಲ್ಲಿ ಒಂದಕ್ಕೆ ಹೋಗಿ ಪ್ರತ್ಯೇಕವಾಗಿ ಕುಳಿತು ಮಾತನಾಡಬಹುದು.

ಆ ದಿನ ವ್ಯರ್ಥವಾದಂತೆಯೇ ಆಯಿತು. ಬಾರ್‌ನಿಂದ ಹೊರಗೆ ಬಂದರು. "ನಮ್ಮಣ್ಣನಿಗೆ ಗೊತ್ತಾಗುತ್ತದೆ. ನೀವು ನಮ್ಮ ಮನೇಕಡೆ ಬರಬೇಡಿ. ನಾನೂ ಮನೆ ತೋರಿಸುವುದಿಲ್ಲ'' ಎಂದು ಹೇಳಿ ಆಟೋರಿಕ್ಷಾ ಮಾಡಿಕೊಂಡು ಹೊರಟುಹೋದಳು.

ಮಾರನೆಯ ದಿನ ಮಾರ್ಕೆಟ್ ಬಳಿಯೇ ಭೇಟಿಯಾಯಿತು ಪುನಃ ಪಿಂಕ್ಸ್‌ಗೆ ಹೋದರು. ಆನಂದ ಒಳಗಿನ ಕೋಣೆಗೇ ಕರೆದುಕೊಂಡು

ಹೋದ. ಇಬ್ಬರೇ ಪ್ರತ್ಯೇಕವಾಗಿ ಕುಳಿತಿದ್ದರು. ಅದು ಹೋಟಲಿನಲ್ಲಿಯೇ ಇರುವವರಿಗೆ ಕೊಡುವ ಕೋಣೆ.

ಇಬ್ಬರೂ ಸ್ವಲ್ಪ ಕುಡಿದ ನಂತರ ಆನಂದ ತಾನು ಅವಳನ್ನು ಪ್ರೀತಿಸುವುದಾಗಿ ಹೇಳಿದಳು.

ಗಂಡು ಹೆಣ್ಣುಗಳು ಯಾವುದಕ್ಕಾಗಿ ಪ್ರೀತಿಸುತ್ತಾರೆಯೋ ಅದೂ ಆಯಿತು.

ದಿನವೂ ಪಿಂಕ್ಸ್‌ಗೋ ಇನ್ನೆಲ್ಲಿಗಾದರೂನೋ ಹೋಗುತ್ತಿದ್ದರು. ಅವಕಾಶ ಸಿಕ್ಕಿದಾಗ ಎರಡು ಮೂರು ಬಾರಿ ಆನಂದನ ಮನದಿಷ್ಟವೂ ಪೂರೈಸಿತ್ತು.

ಒಂದು ದಿನ ಮನೆಗೆ ಹೋಗುವಾಗ ಅವಳು ಹೇಳಿದಳು.

"ನಿಮಗಾಗಿ ನಾನು ಏನು ಮಾಡುವುದಕ್ಕೂ ಸಿದ್ಧ. ಆದರೆ ಹೀಗೆ ಹೋಟೆಲುಗಳಲ್ಲಿ ಮಲಗುವುದು ನಮ್ಮಿಬ್ಬರಿಗೂ ಗೌರವವಲ್ಲ. ದಿನವೂ ಹೊತ್ತಾಗಿ ಹೋಗುವುದರಿಂದ ನಮ್ಮ ಮನೆಯಲ್ಲಿ ಗಲಾಟೆಯಾಗುತ್ತಿದೆ. ನೀವು ಒಂದು ಮನೇ ಮಾಡಿಬಿಡಿ. ನಾನು ಅಲ್ಲಿಗೆ ಬಂದುಬಿಡುತ್ತೇನೆ"

ಅವಳು ಹೇಳುವುದು ನ್ಯಾಯವಾಗಿತ್ತು. ಒಂದೆರಡು ಮನೆಗಳನ್ನು ನೋಡಿದ್ದ. ಬೆಂಗಳೂರಿನಲ್ಲಿ ಸರಿಯಾದ ಮನೆಗಳು ಸಿಗುವುದು ಕಷ್ಟ. ಆ ಕಷ್ಟವೇ ಆನಂದನಿಗೂ ಆಗಿತ್ತು.

ಗಾಂಧೀ ಬಜಾರಿನಿಂದ ಮಾರ್ಕೆಟ್ಟಿಗೆ ನಡೆದುಕೊಂಡು ಹೋಗುತ್ತಾ ಆನಂದ ಯೋಚಿಸುತ್ತಿದ್ದುದು ವಿಮಲೆಯ ವಿಷಯವನ್ನು ಚಿಂತಿಸುತ್ತಿದ್ದುದು ಇನ್ನೂ ಮನೆ ಸಿಕ್ಕಲಿಲ್ಲವಲ್ಲ ಎಂದು.

## ೨

ಅವನು ನಡೆದುಕೊಂಡು ಹೋಗುತ್ತಿದ್ದಂತೆ ಪ್ರಮಾದ ಒಂದು ನಡೆಯುವುದರಲ್ಲಿತ್ತು.

ಸಾಯಂಕಾಲ. ಕತ್ತಲು ಚೆನ್ನಾಗಿಯೇ ಇತ್ತು. ಬೀದಿಯ ದೀಪಗಳು ಹತ್ತಿರಲಿಲ್ಲ. ದೊಡ್ಡ ದೊಡ್ಡ ಸಾಲು ಮರಗಳಿಂದ ಅವ್ಯಕ್ತವಾದ

ನಾರ್ತ್ ರೋಡು ಅಂತಹ ಸಮಯದಲ್ಲಿ ಎಷ್ಟು ಕತ್ತಲಾಗಿರುತ್ತದೆಂಬುದನ್ನು ನೋಡಿದವರೇ ಬಲ್ಲರು.

ರಸ್ತೆಯ ಬಲಗಡೆಯ ಅಂಚಿನಲ್ಲಿ ಆನಂದ್ ಆಲೋಚನಾಮಗ್ನನಾಗಿ ನಡೆದುಕೊಂಡು ಹೋಗುತ್ತಿದ್ದ. ಎದುರುಗಡೆ ಒಬ್ಬ ಮುದುಕ ಬೀದಿಯ ಅಂಚಿನಲ್ಲಿ ನಡೆದುಕೊಂಡು ಬರುತ್ತಿದ್ದಾನೆ. ಉದ್ದನಾದ ಓವರ್‌ಕೋಟು. ತಲೆಗೆ ಮಫ್ಲರ್ ಸುತ್ತಿದ್ದಾನೆ. ವಾಕಿಂಗ್ ಸ್ಟಿಕ್ ಹಿಡಿದು ನಡೆದು ಬರುತ್ತಿದ್ದಾನೆ. ಫುಟ್‌ಪಾತಿನ ಮೇಲೆ ಬರುತ್ತಿಲ್ಲ. ಬೀದಿಯ ಅಂಚಿನಲ್ಲಿ ಎಡಗಡೆಯಾಗಿ ಬರುತ್ತಿದ್ದಾನೆ.

ಜನಗಳೂ, ವಾಹನಗಳೂ ಆಗ ರಸ್ತೆಯಲ್ಲಿ ಓಡಾಡುತ್ತಿರಲಿಲ್ಲ. ಆ ಮುದುಕ ಎಲ್ಲಿ ನಡೆದು ಬಂದರೇನು ?

ಆದರೆ ಹಾಗಾಗಲಿಲ್ಲ. ದೊಡ್ಡದೊಂದು ಹಳೆಯ ಕಾರು ಘುಮುಗುಟ್ಟಿಕೊಂಡು ಬಂತು. ದೀಪವಿರಲಿಲ್ಲ. ಅದರ ಮುಂಭಾಗದಲ್ಲಿ ಇಂಗ್ಲಿಷ್‌ನಲ್ಲಿ 'ಎಲ್' ಎಂದು ಬರೆದ ದೊಡ್ಡ ಕಾರ್ಡುಬೋರ್ಡು ತಗುಲಿಸಿದೆ.

ಕಾರು ಬರುತ್ತಿರುವ ತರಹ ದೂರದಿಂದಲೇ ಆನಂದ್ ಗಮನಿಸಿದ. ಡ್ರೈವರು ಕಾರು ನಡೆಸುವುದನ್ನು ಇನ್ನೂ ಕಲಿಯುತ್ತಿರುವಂತಿತ್ತು.

ಇದ್ದಕ್ಕಿದ್ದ ಹಾಗೆಯೇ ಕಾರು ಮುದುಕನ ಮೇಲೆ ಹರಿಯುವುದರಲ್ಲಿತ್ತು. ದೇವರು ದೊಡ್ಡವನು. ಆನಂದ್ ಮುಂದೆ ಹಾರಿ ಮುದುಕನನ್ನು ತಬ್ಬಿ ಎಳೆದುಕೊಂಡು ಫುಟ್‌ಪಾತಿನ ಮೇಲೆ ಬಂದ.

ಆನಂದ್ ಹಾಗೆ ಮಾಡದೇ ಇದ್ದಿದ್ದರೆ ಖಂಡಿತವಾಗಿ ಅನಾಹುತವಾಗುತ್ತಿತ್ತು. ಮುದುಕ ಸತ್ತುಹೋಗುತ್ತಿದ್ದ.

ಮುದುಕನನ್ನು ಬದುಕಿಸಿದ ಆನಂದ್ ಕಾರಿನ ಕಡೆ ನೋಡಿದ. ಡ್ರೈವರು ನಿಲ್ಲಿಸದೇ ಹೊಡೆದುಕೊಂಡು ಹೋಗುತ್ತಿದ್ದ. ಕಾರು ದೂರದಲ್ಲಿ ಹೋಗುತ್ತಿತ್ತು. ಕತ್ತಲಾಗಿದ್ದುದರಿಂದ ಹಳೆಯ ಬೋರ್ಡಿನಲ್ಲಿ ನಂಬರು ಕಾಣಲಿಲ್ಲ.

ಇನ್ನೇನು ಮಾಡುವುದು ? ಕಾರಿನ ನಂಬರಂತೂ ಸಿಕ್ಕಲಿಲ್ಲ. ಸಿಕ್ಕಿದ್ದರೆ ಪೋಲೀಸ್ ಸ್ಟೇಷನ್ನಿಗೆ ಹೇಳಿ ಆ ಧೂರ್ತ ಡ್ರೈವರನನ್ನು ತರಾಟೆಗೆ ತೆಗೆದುಕೊಳ್ಳುವಂತೆ ಮಾಡಬಹುದಾಗಿತ್ತು.

ಮುದುಕನನ್ನು ಕಳುಹಿಸಿ ಬೇಗ ಹೊರಡಬೇಕು. ಇನ್ನು ಸ್ವಲ್ಪ ಹೊತ್ತಿಗೆಲ್ಲಾ ವಿಮಲೆ ಬಂದುಬಿಡುತ್ತಾಳೆ

"ನಿಮ್ಮ ಮನೆ ಎಲ್ಲಿ ?"

"ಇಲ್ಲೇ ರಂಗರಾವ್ ರಸ್ತೆಯಲ್ಲಿ"

"ಹೋಗಿ. ನಿಧಾನವಾಗಿ ನಡೆದುಕೊಂಡು ಹೋಗಿ. ಬೀದಿಯಲ್ಲಿ ಹೋಗಬಾರದು"

ಮುದುಕನ ಬಾಯಲ್ಲಿ ಏನೋ ಹೇಳಿಕೊಂಡು ಬೀದಿಯಲ್ಲಿಯೇ ಹೊರಟ.

"ಪುನಃ ಬೀದಿಯಲ್ಲಿಯೇ ಹೋಗುತ್ತೀರಲ್ಲಾ"

"ಸುಮ್ಮನಿರಯ್ಯ ! ಎಪ್ಪತ್ತು ವರ್ಷಗಳಿಂದ ಓಡಿಯಾಡುತ್ತಿದ್ದೇನೆ. ಏನೂ ಆಗಿಲ್ಲ. ನಿನ್ನೆಯೋ ಮೊನ್ನೆಯೋ ಕಣ್ಣು ಬಿಟ್ಟಿದ್ದೀ. ನನಗೆ ಬುದ್ಧಿ ಹೇಳುತ್ತೀ ?"

"ಹಾಗಲ್ಲ"

"ಹಾಗೂ ಇಲ್ಲ, ಹೀಗೂ ಇಲ್ಲ"

ಅವನು ಫುಟ್‌ಪಾತಿಗೆ ಬರಲಿಲ್ಲ. ಎದುರಿಗೆ ಪ್ರಕಾಶಮಾನವಾದ ಎರಡು ದೀಪಗಳು ಕಂಡುವು. ಹೊಸ ಡಾಡ್ಜ್ ಕಾರು. ಅದು ನಿಧಾನವಾಗಿ ಹಾವಿನಂತೆ ಹರಿದು ಹೋಯಿತು. ಮುದುಕ ಹೆದರಿ ಫುಟ್‌ಪಾತಿಗೆ ಓಡಿ ಬಂದು ಹೇಳಿದ.

"ಈ ಕಾರುಗಳ ಗಲಾಟೆಯಲ್ಲಿ ಉಳಿಗಾಲವಿಲ್ಲ. ಯಾವ ಮುಂಡೇ ಮಗ ಈ ಕಾರು ಕಂಡುಹಿಡಿದನೋ ?"

ಆನಂದನಿಗೆ ತೋರಿತು.

ಮುದುಕ ಈ ಹೊತ್ತು ಎದ್ದ ಗಳಿಗೆ ಚೆನ್ನಾಗಿಲ್ಲ, ಎಲ್ಲಾದರೂ ಲಾರೀ ಕೆಳಗೆ ಸಿಕ್ಕಿ ಪ್ರಾಣ ಬಿಟ್ಟೇಬಿಡುತ್ತಾನೆ.

ಹೋಗಿ ಆತನ ಕೈಹಿಡಿದುಕೊಂಡು ಹೇಳಿದ.

"ನಡಿಯಿರಿ. ನಿಮ್ಮ ಮನೆಯಲ್ಲಿ ಬಿಟ್ಟು ಹೋಗುತ್ತೇನೆ"

"ಬೇಡ. ನಾನೇ ಹೋಗುತ್ತೇನೆ"

"ಪರವಾಯಿಲ್ಲ. ಬಿಡುತ್ತೇನೆ. ಬನ್ನಿ"

ಮುದುಕನಿಗೆ ಏನು ತೋರಿತೋ ?

"ಹಾಗಾದರೆ ನಡೆ. ಹೋಗೋಣ"

ಹೋಗುತ್ತಾ ಮುದುಕ ಕೂನುರಾಗ ಶುರೂ ಮಾಡಿದ.

ಅದೂ ಸ್ವಲ್ಪಸ್ವಲ್ಪವಾಗಿ ಕಿವಿಗೆ ಬೀಳುತ್ತಿತ್ತು.

"ಎಲ್ಲಿ ನೋಡಲು ಶೋಭಿಕುಂ............"

ಒಳ್ಳೆ ಮುದುಕ ಸಿಕ್ಕಿದನಲ್ಲ. ಗಳಿಗೆಯ ಮೊದಲು ಪ್ರಾಣ ಹೋಗುವುದರಲ್ಲಿತ್ತು. ಈಗ ಒಳ್ಳೇ ಖುಷಿಯಾಗಿ "ಎಲ್ಲಿ ನೋಡಲು........" ಹಾಡುತ್ತಿದ್ದಾನೆ.

ಆನಂದ ಹಿಂದೆಲ್ಲಿಯೂ ಇದನ್ನು ಕೇಳಿರಲಿಲ್ಲ. ಎಲ್ಲಿ ನೋಡಲು ಶೋಭಿಕುಂ– ಏನು ಶೋಭಿಸುತ್ತಿದೆ ? ಏನು ಹೇಳುತ್ತಿದ್ದಾನೆ.

"ಹಾಗೆಂದರೆ ಏನು ?"

"ಏನೆಂದರೆ........"

"ಅದೇನೋ ಹೇಳುತ್ತಿದ್ದೀರಲ್ಲಾ ?"

"ಓಹೋ ! ಅದೇ ಮನ್ಮಥವಿಜಯದ್ದು"

ಅದೂ ಅವನಿಗೆ ಅರ್ಥವಾಗಲಿಲ್ಲ.

"ನೀವು ಹೇಳುವುದೊಂದೂ ನನಗೆ ಅರ್ಥವಾಗಲಿಲ್ಲ"

"ಅದೇ. ನಾಟಕ ಶಿರೋಮಣಿ ವರದಾಚಾರ್ಯರ ಹೆಸರು ಕೇಳಿದ್ದೀಯಾ ? ಅವರು ಮನ್ಮಥ ವಿಜಯ ಆಡುತ್ತಿದ್ದರು. ಆಚಾರ್ಯರು "ಎಲ್ಲಿ ನೋಡಲು ಶೋಭಿಕುಂ........" ಎಂದು ಹಾಡಿಕೊಂಡು ಬಂದರೆ ಥಿಯೇಟರಿಗೆ ಥಿಯೇಟರೇ ಜುಮ್ಮೆನ್ನುತ್ತಿತ್ತು"

"ಓಹೋ ! ಈಗ ಅರ್ಥವಾಯಿತು"

"ಏನು ಅರ್ಥವಾಯಿತು. ನಿನ್ನೆ ಮೊನ್ನೆಯ ಹುಡುಗ. ನಿನಗೇನು ಗೊತ್ತು, ಆ ವಿಷಯ. ಶಿವ ತಪಸ್ಸು ಮಾಡುತ್ತಾ ಕುಳಿತಿದ್ದಾನೆ. ಇಂದ್ರನಿಂದ ಪ್ರೇರಿತನಾದ ಮನ್ಮಥನು ಬರುತ್ತಾನೆ. ಮನ್ಮಥನ ಪಾತ್ರ ಧರಿಸಿದ ಆಚಾರ್ಯರು ಹಾಡುತ್ತಿದ್ದರು. "ಭೀಷಣ ತಪೋ ಮಹಾಗ್ನಿ ನಿಶೋಷಿತ ಜಲಮಾಗೆ ಜಲಧಿ"ಪಂಚರಾಗಗಳಲ್ಲಿ. ಇನ್ನು ಆ ಕಾಲವೆಲ್ಲಿ?

ಆಚಾರ್ಯರನ್ನು ಎಲ್ಲರೂ ಹೊಗಳುತ್ತಾರೆ. ನೀವು ನೋಡಿದ್ದರಲ್ಲಿ ಅಂತಹ ನಟರು ಈಗ ಯಾರಿದ್ದಾರೆ ?''

''ಯಾರಿದ್ದಾರೆ ? ನಭೂತೋ ನಭವಿಷ್ಯತಿ. ಅವರಂತಹವರು ಹಿಂದೆ ಇರಲಿಲ್ಲ. ಮುಂದೆ ಹುಟ್ಟುವುದಿಲ್ಲ''

ರಂಗರಾವ್ ರಸ್ತೆಗೆ ತಿರುಗುವವರೆವಿಗೆ ಸುಮ್ಮನಿದ್ದು ಆನಂದ್ ತನಗಾಷೆಗೆ ಕೇಳಿದ.

''ನೀವು ಹೇಳುವುದೆಲ್ಲವನ್ನೂ ಕೇಳಿದರೆ ನೀವೂ ಪಾರ್ಟು ಮಾಡುತ್ತಿದ್ದೀರೆಂದು ತೋರುತ್ತದೆ''

''ಮಾಡುತ್ತಿದ್ದೆನಪ್ಪಾ. ಮಾಡುತ್ತಿದ್ದೆ. ಆದರೆ ಈಗ ನನ್ನನ್ನೆಲ್ಲಾ ಕೇಳುವವರು ಯಾರು ?''

''ಹಾಗೆಂದರೇನು, ಸ್ವಾಮಿ. ಅವರವರಿಗೆ ಕೊಡಬೇಕಾದ ಗೌರವ ಅವರವರಿಗೆ ಕೊಡಲೇಬೇಕು''

ಹುಡುಗ ಸಭ್ಯನೆಂದು ಮುದುಕನಿಗೆ ಸಂತೋಷವಾಯಿತು.

''ಎಲ್ಲರೂ ನಿನ್ನಂತೆಯೇ ಇದ್ದಿದ್ದರೆ ಈ ಭೂಲೋಕ ದೇವಲೋಕವಾಗುತ್ತಿತ್ತು, ಮಗು''

ಮುದುಕ ಮಗುವನ್ನು ಕರೆದುಕೊಂಡು ಮನೆಗೆ ಹೋದ. ರಂಗರಾವ್ ರಸ್ತೆಯಲ್ಲಿ ಕೆಲವು ಹೆಜ್ಜೆಗಳನ್ನು ನಡೆದು ಹೋದರೆ ಅವನ ಮನೆ. ಗೇಟು ತೆಗೆದ ಶಬ್ದವು ಕೇಳುತ್ತಲೇ ಜಗುಲಿಯ ಮೇಲೆ ಕುಳಿತು ಯಾವುದೋ ನಾವೆಲ್ ಓದುತ್ತಿದ್ದ ತರುಣಿಯೊಬ್ಬಳು ಪುಸ್ತಕವನ್ನು ಕೈಯಲ್ಲಿಯೇ ಹಿಡಿದುಕೊಂಡು ಮುಂದೆ ಬಂದು ಮೆಟ್ಟಿಲಿನ ಮೇಲೆ ನಿಂತುಕೊಂಡಳು.

ಯುವಕನು ಯಾರು ಎಂದು ತರುಣಿಗೆ ಆಲೋಚನೆ ಬಂದಿತು. ಆದರೆ ಬಾಯಿಬಿಟ್ಟು ಕೇಳಲಿಲ್ಲ. ನೋಟದಲ್ಲಿ ಪ್ರಶ್ನೆಯನ್ನು ಕೇಳಿದಂತೆ ಮಾಡಿದಳು. ಮುದುಕ ಆ ನೋಟ ಗಮನಿಸಲಿಲ್ಲ. ವೃದ್ಧ ಯುವಕನನ್ನು ಒಳಗೆ ಕರೆದುಕೊಂಡು ಹೋಗಿ ಸೋಫಾದ ಮೇಲೆ ಕುಳಿತುಕೊಳ್ಳುವಂತೆ ಹೇಳಿ ''ಲಲಿತಾ'' ಎಂದು ಕೂಗಿದ.

ಅವರುಗಳ ಹಿಂದೆಯೇ ಬಂದಿದ್ದ ಲಲಿತಾ '' ಏನಪ್ಪಾ ?'' ಎಂದಳು.

ಆಶಾ ! ಆಶೆಯಾಗುವಂತೆಯೇ ಇದ್ದಾಳೆ. ಇವಳು ವೃದ್ಧನ ಮೊಮ್ಮಗಳೇನು ?

"ಸ್ವಲ್ಪ ಕೋಟು ತೆಗೆದುಕೋ. ಸ್ವಲ್ಪ ಈ ಓವರ್‌ಕೋಟು ಬಿಚ್ಚಮ್ಮ. ಬಹಳ ಸೆಕೆಯಾಗುತ್ತದೆ."

ಮುದುಕ ತಲೆಗೆ ಸುತ್ತಿಕೊಂಡಿದ್ದ ಮಫ್ಲರ್ ತೆಗೆದು, ಮೊಮ್ಮಗಳ ಸಹಾಯದಿಂದ ಓವರ್‌ಕೋಟು ಬಿಚ್ಚಿ, ಅವಳು ಕೈಗೆ ನೀತು ಹಾಕಿಕೊಂಡಿದ್ದ ದಂತದ ಹಿಡಿಯ ಬೆತ್ತವನ್ನು ತೆಗೆದುಕೊಂಡ.

ಹೊರ ಪೋಷಾಕು ಬಿಚ್ಚಿದರೂ ಒಳ ಪೋಷಾಕು ಹಾಗೆಯೇ ಇತ್ತು. ಮನುಷ್ಯ ನೋಡುವುದಕ್ಕೆ ರಾಜಾ ಪಾರ್ಟು ಹಾಕಿಕೊಂಡವನಂತೆ ಇದ್ದಾನೆ. ಮೈಸೂರಿನಲ್ಲಿ ಹಳೆಯ ಕಾ ಲ ದ ಅರಸರು ಇಟ್ಟುಕೊಳ್ಳುವಂತಹ ಬಣ್ಣದ ಸಿಲ್ಕ್ ಪೇಟಾ. ತುಂಬಾ ಜರೀ ಕೆಲಸ ಮಾಡಿದ ಬಟ್ಟೆ ಬೆಂಡಿಗೆ ಸುತ್ತಿದೆ. ಮೈಗೆ ಉದ್ದವಾದ ಕರಿಯ ಕೋಟು. ಮೂರು ಬೆರಳಗಲ ಕಲಾಪತ್ತಿನ ಪಂಚೆ ಕಚ್ಚೆ ಹಾಕಿ ಉಟ್ಟಿದ್ದಾನೆ. ಎರಡು ಕೈಗಳಲ್ಲಿಯೂ ಎರಡೆರಡು ಉಂಗುರಗಳು.

ವೃದ್ಧ ಪುರುಷನು ಬಲಗೈಯ್ಯಲ್ಲಿ ಬೆತ್ತ ಹಿಡಿದು, ಎಡಗೈಯ್ಯಲ್ಲಿ ಮೀಸೆಯನ್ನೊಮ್ಮೆ ಹುರಿಮಾಡಿ, ತಾನೂ ಬಂದು ಸೋಫಾದ ಮೇಲೆ ಕುಳಿತುಕೊಂಡು ಹೇಳಿದ.

"ನಮ್ಮ ಕಾಲ ಈಗೆಲ್ಲಿದೆ ? ಕಾಂಗ್ರೆಸ್ ಸರ್ಕಾರ ಬಂದು ಮರ್ಯಾದೆ ಎಂಬುದೇ ಇಲ್ಲ"

ಆನಂದ ಹೂಗುಟ್ಟಿ "ಹೊತ್ತಾಗುತ್ತಾ ಬಂತು. ನಾನಿನ್ನು ಹೊರಡಲೇ?" ಎಂದ

"ಎಲ್ಲಾದರೂ ಉಂಟೇ? ಈದಿನ ಪ್ರಾಣ ಉಳಿಸಿದ್ದೀ. ಅಂತಹವನನ್ನು ಸುಮ್ಮನೆ ಕಳಿಸುವುದೇ? ಆಶಾ".

ಓವರ್ ಕೋಟು ಒಳಗಿಡಲು ಹೋಗಿದ್ದ ಆಶಾ ಅಷ್ಟು ಹೊತ್ತಿಗಾಗಲೇ ವಾಪ್ಸು ಬರುತ್ತಿದ್ದಳು. ತಾತ "ನನ್ನ ಪ್ರಾಣ ಉಳಿಸಿದ್ದೀ" ಎಂದು ಹೇಳಿದ ಮಾತು ಅವಳ ಕಿವಿಯ ಮೇಲೆ ಬಿದ್ದಿತು. ಗಾಬರಿಯಿಂದ ಪ್ರಶ್ನೆ ಮಾಡಿದಳು.

"ಏನು, ಏನಾಯಿತು?"

"ಏನು ಹೇಳಲಿ, ಆಶಾ. ಯಾವನೋ ಮುಂಡೇ ಮಗ ನನ್ನ ಮೇಲೆ ಕಾರು ಬಿಟ್ಟ. ಪ್ರಾಣತೆಗೆದು ಬಿಡುವುದರಲ್ಲಿದ್ದ. ಈ ಪುಣ್ಯಾತ್ಮ ಬಂದು ಪಕ್ಕಕ್ಕೆ ಎಳೆದು ನನ್ನನ್ನು ಕಾಪಾಡಿದ"

ಆಶಾ ಯುವಕನ ಕಡೆ ನೋಡುತ್ತಾ ಮಂದಹಾಸವನ್ನು ಬೀರಿ ಕೈಮುಗಿದು ಹೇಳಿದಳು.

"ತಮ್ಮಿಂದ ಬಹಳ ಉಪಕಾರವಾಯಿತು".

"ಅದೇನು ಮಹಾ. ನಿಮ್ಮ ತಾತನವರು ಸಣ್ಣ ವಿಷಯ ದೊಡ್ಡದು ಮಾಡಿ ಹೇಳುತ್ತಾರೆ".

"ಸಣ್ಣದೇನಿಲ್ಲ, ದೊಡ್ಡದೇ, ಆಶಾ. ಇವರಿಗೆ ಒಂದು ಕಪ್ಪು ಕಾಫೀ ಮಾಡಿ ತಂದು ಕೊಡುತ್ತೀಯ? ಬೇಡಮ್ಮ. ಕಾಫೀ ಮಾಡುವುದೆಂದರೆ ನಿನಗೆ ತೊಂದರೆಯಾಗಬಹುದ . ಓವಲ್‌ಟನ್ನೇ ಮಾಡಿ ತಂದು ಬಿಡು.

ಆನಂದ ಬೇಡವೆನ್ನುತ್ತಿರುವಂತೆಯೇ ಆಶಾ ಒಳಗೆ ಹೋದಳು;

ಸುಮ್ಮನೆ ಎಷ್ಟು ಹೊತ್ತು ಕುಳಿತಿರುವುದು. ಓವಲ್‌ಟನ್ ಬರುವವರೆವಿಗೆ ಏನಾದರೂ ಮಾತನಾಡಬೇಕಲ್ಲ. ಜಗುಲಿ ಹತ್ತಿದಾಗ ಬಾಗಿಲು ಬಳಿ ತಗಲಿಸಿದ್ದ ಇನ್ ಅಂಡ್ ಔಟ್ ಬೋರ್ಡ್ ನೋಡಿದ್ದ. ಅದರಲ್ಲಿ ಬರೆದಿದ್ದ ಧರ್ಮರತ್ನಕರ ಬಾಬೂರಾವ್ ಎಂಬ ಹೆಸರನ್ನು ಓದಿದ ಕೂಡಲೇ ಗೃಹ ಸ್ವಾಮಿಯ ವಿಷಯ ಸ್ವಲ್ಪ ನೆನಪಿಗೆ ಹಾಗಾಯಿತು. ಹೊತ್ತುಹೋಗಲು ಆ ಮಾತು ಎತ್ತಿದ.

"ನೀವಾವುದೋ ಕಾಲೋನಿ ಮಾಡುತ್ತಿರುವಂತಿದೆ ಅಲ್ಲವೇ?"

"ಅಯ್ಯೋ, ಅದೊಂದು ಕತೆ, ನೋಡಿ. ವೈಯ್ಯಾಳೀ ಕಾವಲ್ ಕಡೆ ನನ್ನದೊಂದು ಸ್ವಲ್ಪ ರೆವೆನ್ಯೂ ಲ್ಯಾಂಡ್ ಇದೆ. ಹಿಂದೆ ನಾಟಕದಲ್ಲಿ ಯಾವಾಗಲೊ ನನ್ನೊಂಗೆ ಪಾರ್ಟ್ ಮಾಡುತ್ತಿದ್ದ ಸ್ನೇಹಿತನೊಬ್ಬ ಬಂದು ಗಂಟು ಬಿದ್ದ. ಅಲ್ಲೆಲ್ಲ ಮನೆಗಳನ್ನು ಕಟ್ಟಿ ಜನಗಳಿಗೆ ಕೊಟ್ಟರೆ. ನಮಗೂ ಸ್ವಲ್ಪ ಹಣ ಬರುವುದರ ಜೊತೆಗೆ ಲೋಕೋಪಕಾರವೂ ಆಗುತ್ತದೆಂದು ಹೇಳಿದ. ನಾನೂ ಒಪ್ಪಿಕೊಂಡೆ. ಕೆಲಸ ಶುರುವಾಯಿತು. ಅಷ್ಟರಲ್ಲಿ ತನಗೇನೋ

ಮೈ ಚೆನ್ನಾಗಿಲ್ಲವೆಂದು ಹೊರಟುಹೋದ. ನಾನೇ ಅದನ್ನು ಕಟ್ಟಿಕೊಂಡು ಸಾಯಬೇಕಾಗಿದೆ”.

ಆ ಕಂಪನಿಯ ವಿವರಗಳೊಂದು ಗೊತ್ತಿಲ್ಲದಿದ್ದರೂ ಅನೇಕ ಮನೆಗಳನ್ನು ಕಟ್ಟುವ ಕಂಪನಿ ಎಂಬುದಷ್ಟು ಮಾತ್ರ ಆನಂದನಿಗೆ ಗೊತ್ತಿತ್ತು. ಅವನು ಹೇಳಿದ.

“ಮನೆಗಳಿಲ್ಲದ ಈ ಕಾಲದಲ್ಲಿ ಮನೆಗಳನ್ನು ಕಟ್ಟುವುದು ವಾಸ್ತವವಾಗಿ ಲೋಕೋಪಕಾರ. ಈ ಕೆಲಸ ನಿಮ್ಮ ಬಿರುದು “ಧರ್ಮರತ್ನಾಕರ” ಎಂಬುದಕ್ಕೇ ತಕ್ಕ ಹಾಗೆಯೇ ಇದೆ”.

“ಎಲ್ಲರೂ ಹಾಗೆಯೇ ಹೇಳುತ್ತಾರೆ. ಆದರೆ ನನಗೆ ಅದೊಂದೂ ಇಷ್ಟವಿಲ್ಲ. ಒಂದು ಸೊಗಸಾದ ನಾಟಕದ ಕಂಪನಿ ಮಾಡಿಬಿಡಬೇಕೆಂದಿದೆ. ಇಷ್ಟು ವಯಸ್ಸಾದನಂತರ ಆಗುವುದಿಲ್ಲವೆಂದು ಸುಮ್ಮನ್ನಾಗಿದ್ದೇನೆ. ನಿಮ್ಮಂತಹ ಯುವಕರು ಮುಂದೆ ಬಂದರೆ ಇಂದೂ ನಾನು ಬಾವುಟ ಚಡಾಯಿಸಿಬಿಟ್ಟೇನು”

“ನೀವು ಮಾಡಿಬಿಡುವವರೇ! ನೀವು ನಾಟಕದ ಮಟ್ಟುಗಳನ್ನು ಹಾಡಿಕೊಂಡು ಬಂದಾಗ ಕೇಳಿದೆನಲ್ಲಾ. ಕಂಠ ಈಹೊತ್ತೂ ಕಂಚು ಹೊಡೆದ ಹಾಗಿದೆ”

ಮುದುಕ-ಅಳುವ ಧ್ವನಿಯಲ್ಲಿ ಮಾತನಾಡ ತೊಡಗಿದ

“ಈಗೇನಿದೆಯಪ್ಪ, ನನ್ನ ಕಂಠ. ನಾನು ಸಾಧಾರಣವಾಗಿ ಜವಾನನ ಪಾರ್ಟು, ರಾಕ್ಷಸನ ಪಾರ್ಟುಗಳನ್ನು ಹಾಕುತ್ತಿದ್ದೆ. ಒಂದು ದಿನ ಯಜಮಾನರು ಕಂಪನಿ ಮನೆಯಲ್ಲಿರಲಿಲ್ಲ, ಏಳೆಂಟು ಮಂದಿ ನಟರನ್ನು ಕೂಡಿಕೊಂಡು ಯಜಮಾನರು ನಾಟಕದಲ್ಲಿ ಹಾಡುವ ಮಟ್ಟುಗಳನ್ನು ಹಾಡುತ್ತಿದ್ದೆ. ಮಹಾನುಭಾವ. ಮರೆಯಲ್ಲಿ ನಿಂತು ಎಲ್ಲವನ್ನೂ ಕೇಳಿದ್ದ. ಒಳಗೆ ಬಂದಿದ್ದೇ ತಬ್ಬಿಕ್ಕೊಂಡು “ಭೇಷೋ, ಬಾಬು ಭೇಷ್”. ನನ್ನ ಹೆಸರು ಉಳಿಸುವವನ್ನು ಎಂದರೆ ನೀನೆ! ಥೇಟ್ ನನ್ನ ಹಾಗೆಯೇ ಹಾಡುತ್ತೀ” ಎಂದರು. ಅಂದಿನಿಂದ ಯಜಮಾನರಿಗೆ ಮೈ ಚೆನ್ನಾಗಿಲ್ಲದಿದ್ದರೆ, ಅವರು ಹಾಡದಿದ್ದರೆ ಅವರ ಪಾರ್ಟುಗಳೆಲ್ಲಾ ನನಗೇ ಮೀಸಲು.

ಮುದುಕ ಮುಂದೇನು ಮಾತನಾಡುತ್ತಿದ್ದನೋ. ಕೈಯಲ್ಲಿ ಎರಡು ಕಪ್ಪು ಕಾಫೀ ಹಿಡಿದುಕೊಂಡು ಬಂದ ಆಶಾ ಅಂದಳು.

"ಏನಪ್ಪಾ ಹಳೇ ಕತೆ ಶುರುಮಾಡಿಬಿಟ್ಟೆ. ಏನೋ ಒಂದು ಗಳಿಗೆ ಬಂದಿರುವವರನ್ನು ಯಾತಕ್ಕೆ ಬೇಜಾರು ಮಾಡುತ್ತೀಯೆ ?

"ನಾನೆಲ್ಲಿ ಬೇಜಾರು ಮಾಡಿದೆನಮ್ಮ. ಕೇಳಿದರು. ಹೇಳುತ್ತಿದ್ದೇನೆ"

"ಬೇಜಾರೇನಿಲ್ಲ. ನಿಮ್ಮ ತಾತ ಹೇಳುತ್ತಿವುದು ಸ್ವಾರಸ್ಯವಾಗಿದೆ".

"ಆದಿರಲಿ ಕಾಫೀ ತೆಗೆದುಕೊಳ್ಳಿ".

ಆಶಾ ಅವನಿಗೆ ಕಾಫೀ ಕೊಟ್ಟಳು ತನಗೆ ನಿದ್ದೆ ಬರುವುದಿಲ್ಲವೆಂದೂ ಇಷ್ಟು ಹೊತ್ತಿನಲ್ಲಿ ಏನೂ ಬೇಡವೆಂದೂ ಮುದುಕ ಹೇಳಿದ. ಆಶಾ ತಾನೇ ಕುಡಿಯ ತೊಡಗಿದಳು.

"ಬಹಳವಾಗಿ ಕುಡಿದ ದಿನ ವೇಷ ಹಾಕಿಕೊಂಡು ಯಜಮಾನರು ಸ್ಟೇಜಿನ ಮೇಲೆ ಹೀಗೆ ಬಂದು ಹಾಗೆ ಹೊರಟು ಹೋಗುತ್ತಿದ್ದರು. ಅವರ ಬದಲು ನಾನೇ ಪಾರ್ಟು ಮಾಡುತ್ತಿದ್ದೆ. ಪಾರ್ಟು ಮಾಡುತ್ತಿರುವವರು ಯಜಮಾನರಲ್ಲ ಎಂದು ಗೊತ್ತಾಗುತ್ತಲೇ ಇರಲಿಲ್ಲ".

"ಈಗ ಅವೆಲ್ಲಾ ಯಾಕೆ? ನಿನಗೆ ಗೊತ್ತಾಗುವುದಿಲ್ಲ, ಸುಮ್ಮನಿರು. ನೀನು ಹೇಳುವುದನ್ನು ಕೇಳಿದರೆ ಜನ ನಗುತ್ತಾರೆ?"

"ಯಾಕೆ ನಗಬೇಕು? ನಾನೇನು ಹೇಳುತ್ತಿದ್ದೇನೆಯೋ? ನನ್ನ ಜೊತೆಯಲ್ಲಿ ಪಾರ್ಟು ಮಾಡುತ್ತಿದ್ದವರು ಈ ದಿನವೂ ಎಷ್ಟು ಜನರಿಲ್ಲ. ಬೇಕಾದರೆ ಕೇಳಿಸುತ್ತೇನೆ.

"ನಿನಗೆಷ್ಟು ಹೇಳಿದರೂ ಗೊತ್ತಾಗುವುದಿಲ್ಲ".

"ಹಾಳಾಗಿ ಹೋಗಲಿ ಬಿಡು. ನಿನ್ನೆದುರಿಗೆ ಮಾತೇ ಆಡುವುದಿಲ್ಲ".

ತಾತ ಮೊಮ್ಮಗಳ ಜಗಳಕ್ಕೆ ತಾನು ಕಾರಣನಾದೆನಲ್ಲಾ ಎಂದು ಆನಂದನಿಗೆ ಸಂಕೋಚವಾಯಿತು. ಹೇಗಾದರೂ ತಪ್ಪಿಸಿಕೊಂಡು ಹೊರಟು ಹೋಗೋಣವೆಂದು ಹೇಳಿದ.

"ಹೊತ್ತಾಗುತ್ತದೆ. ನಾನಿನ್ನು ಹೋಗಿಬರುತ್ತೇನೆ".

ಆಶಾ ಕೈಮುಗಿದು ನಕ್ಕಳು.

ಎದ್ದು ನಿಂತು ಹೊರಡುವುದರಲ್ಲಿದ್ದವನನ್ನು ಕರೆದು ಮುದುಕ ಹೇಳಿದ.

"ನೀನು ಸಾವಕಾಶವಾಗಿ ಬಾ. ನಿನ್ನೊಡನೆ ಬಹಳ ಮಾತನಾಡ ಬೇಕಾಗಿದೆ".

ಬರಬಹುದೋ ಬೇಡವೋ ಎನ್ನುವಂತೆ ಆಶೆಯ ಕಡೆ ನೋಡಿದ.

"ನೀವು ನಮ್ಮ ತಾತನಿಗೆ ಸ್ನೇಹಿತರಾಗಿ ಬಿಟ್ಟಿದ್ದೀರಿ. ನೀವೆ ಆಗಾಗ ಅವರನ್ನು ಬಂದು ನೋಡಿಕೊಂಡು ಹೋಗುವುದು ಒಳ್ಳೇಯದು. ಇಲ್ಲದಿದ್ದರೆ. ಅವರೇ ಎಲ್ಲಿದ್ದರೂ ನಿಮ್ಮ ಮನೆ ಹುಡುಕಿಕೊಂಡು ಬಂದು ಝಂಡಾ ಹೊಡೆದು ಬಿಡುತ್ತಾರೆ.

# ೨

ಮಾರನೆಯ ದಿನ ಬೆಳಗಾಗ ಆನಂದ್ ತನ್ನ ಸ್ನೇಹಿತನೊಬ್ಬನನ್ನು ನೋಡಲು ಗಾಂಧಿನಗರಕ್ಕೆ ಹೋಗಿದ್ದ. ವಾಪಸು ಬರುತ್ತಾ ವೈಯಾಳೀ ಕಾವಲ್ ಹೌಸ್ ಬಿಲ್ಡಿಂಗ್ ಕಂಪನಿಯ ದೊಡ್ಡ ಬೋರ್ಡು ನೋಡಿದ. ಅದೇ ಧರ್ಮರತ್ನಾಕರ ಬಾಬೂರಾಯರ ಕಂಪನಿ. ಅದೇನು ಮನೆಗಳನ್ನು ಕಟ್ಟುತ್ತಾರೋ ಏನು ಮಾಡುತ್ತಾರೋ ನೋಡಿಕೊಂಡು ಬರೋಣವೆಂದು ಆ ಕಂಪನಿಗೆ ಹೋದ.

ದೊಡ್ಡ ಮನೆಯೊಂದರ ಮಹಡಿಯ ಮೇಲೆ ಕಂಪನಿಯ ಆಫೀಸು. ಹೊರಗಡೆ ಜವಾನ. ಒಳಗಡೆ ಬೇಕಾದಷ್ಟು ಫರ್ನಿಚರು. ಆಫೀಸು ಜಬರ ದಸ್ತಾಗಿತ್ತು. ಹೋಗುತ್ತಲೇ ಕಣ್ಣಿಗೆ ಕಾಣುವಂತೆ ಧರ್ಮ ರತ್ನಾಕರ ಬಾಬೂರಾಯರ ದೊಡ್ಡ ಛಾಯಚಿತ್ರ. ಮೂಲೆಯಲ್ಲಿ ಸೆಕ್ರೆಟರಿ ರೂಮು.

ಆ ಕೋಣೆಯನ್ನು ಪ್ಲೈವುಡ್‌ನಿಂದ ನಿರ್ಮಿಸಿ ಥಳಥಳ ಗುಟ್ಟುವಂತೆ ಪಾಲಿಷ್ ಮಾಡಲಾಗಿತ್ತು. ಬಾಗಿಲು ತೆಗೆದಿದ್ದುದರಿಂದ ಯಾರನ್ನೂ ಕೇಳದೇ ಆನಂದ್ ಒಳಗೆ ಪ್ರವೇಶಿಸಿದ.

ನೂರಾರು ರೂಪಾಯಿ ಬೆಲೆಬಾಳುವ ಮೇಜದ ಮುಂದೆ ಐರೋಪ್ಯ ವೇಷಧಾರಿಯು ಕುಳಿತು ಸಿಗರೇಟು ಸೇದುತ್ತಿದ್ದ. ವೇಷ ಹಾಗಿದ್ದರೂ ನಮ್ಮ ದೇಶದವನೇ ಎನ್ನುವುದು ಸ್ಪಷ್ಟವಾಗಿ ಕಂಡುಬರುತ್ತಿತ್ತು. ಮೇಜದ.

ಮೇಲೆ ಎಸ್. ಜಿ. ಪಿಳ್ಳೆ, ಸೆಕ್ರೆಟರಿ ಎಂದು ಬರೆದಿಟ್ಟ, ಮರದ ತುಂಡು ಅಲು ಗಾಡದೇ ಕುಳಿತಿತ್ತು.

ಆನಂದ್ ಒಳಗೆ ಹೋಗಲು ಪಿಳ್ಳೆ ಹಸನ್ಮುಖಿ ಮಾಡಿ "ಬನ್ನಿ ಬನ್ನಿ ಕುಳಿತುಕೊಳ್ಳಿ" ಎಂದ.

ಅಭ್ಯಾಗತ ಕುಳಿತುಕೊಂಡ ಮೇಲೆ ಗೋಲ್ಡ್ ಫ್ಲೇಕ್ ಸಿಗರೇಟ್ ಟಿನ್ ತೆಗೆದು ಸಿಗರೇಟು ಕೊಟ್ಟು, ಆತ ಹಚ್ಚಿಕೊಂಡನಂತರ ಕೇಳಿದ

"ತಮಗೇನಾಗ ಬೇಕಾಗಿದೆ ?"

ತನಗೆ ಹಿಂದಿನ ದಿನ ಸಾಯಂಕಾಲ ಧರ್ಮರತ್ನಾಕರರು ಸಿಕ್ಕಿದುದೂ ತಾನು ಅವರ ಪ್ರಾಣ ಉಳಿಸಿ ಪರಿಚಯ ಮಾಡಿಕೊಂಡುದೂ ಮುಂತಾದು ವೊಂದನ್ನೂ ಆನಂದ ಹೇಳಲಿಲ್ಲ.

"ಯಾವಾಗಲೋ ಪೇಪರಿನಲ್ಲಿ ನಿಮ್ಮ ಕಂಪೆನಿಯ ಅಡ್ವರ್‌ಟೈಜ್ ಮೆಂಟ್ ನೋಡಿದ್ದೆ. ಏನು ಸಮಾಚಾರವೋ ವಿವರವಾಗಿ ತಿಳಿದುಕೊಂಡು ಹೋಗೋಣವೆಂದು ಬಂದೆ"

"ಓಹೋ, ಅಗತ್ಯವಾಗಿ. ತಮ್ಮಂತಹವರಿಗೆ ತಿಳಿಸುವುದಕ್ಕಾಗಿಯೇ ನಾನಿ ರುವುದು ನೋಡಿ. ನಮ್ಮ ಕಂಪನಿಯ ಮಾಲೀಕರಾದ ಧರ್ಮರತ್ನಾಕರ ಬಾಬೂರಾಯರಿಗೆ ವೈಯ್ಯಾಳೀ ಕಾವಲ್ ಬಳಿ ಒಂದು ಚದುರ ಮೈಲಿ ಯಷ್ಟು ನಿವೇಶನವಿದೆ. ಅಲ್ಲೆಲ್ಲಾ ಸೈಟುಗಳನ್ನು ಮಾಡಿದ್ದೇವೆ. ಮನೆಗ ಳನ್ನು ಕಟ್ಟಲು ಏರ್ಪಾಡುಗಳನ್ನು ಮಾಡಿದ್ದೇವೆ. ಸೈಟಿನ ಮೇಲೆ ಎರಡು ಸಾವಿರ. ಮನೆ ಕಟ್ಟಲು ಎಂಟು ಸಾವಿರ. ಒಟ್ಟು ಹತ್ತು ಸಾವಿರವಾಗು ತ್ತದೆ. ನಮಗೆ ಮೂರು ಸಾವಿರ ರೂಪಾಯಿ ಕೊಟ್ಟರೆ ಮನೆ ಕಟ್ಟಿಕೊಟ್ಟು ಬಿಡುತ್ತೇವೆ. ಉಳಿದ ಏಳು ಸಾವಿರವನ್ನು ನೀವು ಸುಲಭವಾದ ಕಂತುಗ ಳಲ್ಲಿ ಕೊಡಬಹುದು"

ವಿಷಯ ಮತ್ತಷ್ಟು ವಿವರವಾಗಿ ತಿಳಿದುಕೊಳ್ಳಲು ಆನಂದ್ ಕೇಳಿದ

"ಮನೆ ಕಟ್ಟಿಕೊಳ್ಳಲು ಸಾಲ ಕೊಡುವ ಸೊಸೈಟಿಗಳೂ, ಕಾರ್ಪೊರೇಷನ್ ಗಳೂ ಇವೆಯಲ್ಲಾ. ಹಾಗಿರುವಾಗ ನಿಮ್ಮ ಕಂಪೆನಿಯಿಂದ ನಮಗೆ ಸಿಗುವ ಹೆಚ್ಚು ಸವಲತ್ತೇನು ?"

"ಎಷ್ಟೋ ಇವೆ. ನೀವೇ ಮನೆಕಟ್ಟಿಕೊಳ್ಳಬೇಕಾದರೆ ಸಾಮಾನು ಸರಂಜಾಮುಗಳನ್ನು ಒದಗಿಸಿಕೊಳ್ಳಬೇಕು. ಅವು ಸಮಯದಲ್ಲಿ ಒಂದು ಸಿಕ್ಕಿದರೆ ಮತ್ತೊಂದು ಸಿಕ್ಕುವುದಿಲ್ಲ. ಅದೊಂದು ಕಷ್ಟ, ಒಂದೇ ಮನೆ ಯನ್ನು ಕಟ್ಟುವ ನಿಮಗೆ ಖರ್ಚು ಹೆಚ್ಚು ಬೀಳುತ್ತದೆ. ನಾವಾದರೋ ನೂರಾರು ಮನೆಗಳನ್ನು ಕಟ್ಟುವುದರಿಂದ ಖರ್ಚು ಕಡಿಮೆಯಾಗುತ್ತದೆ. ನಾವು ಕಟ್ಟಿಕೊಡುವಂತಹ ಮನೆ ನೀವೇ ಕಟ್ಟಬೇಕಾದರೆ ಸೈಟಿನ ಬೆಲೆಯ ಲ್ಲದೇ ಹತ್ತು ಸಾವಿರವಾಗುತ್ತದೆ"

"ಹೌದು. ಒಂದು ವಿಧವಾಗಿ ನೀವು ಹೇಳುವುದು ಸಮಂಜಸವಾಗಿ ಕಂಡುಬರುತ್ತದೆ"

"ಅಷ್ಟೇ ಅಲ್ಲ, ಸ್ವಾಮಿ. ಆ ಸೊಸೈಟಿಗಳು, ಕಾರ್ಪೊರೇಷನ್‌ಗಳು ಎಂದಿರಲ್ಲ, ಅದೆಲ್ಲಾ ಪ್ರಯೋಜನವಿಲ್ಲ. ನೀವು ಮೊದಲು ಸೈಟು ತೆಗೆದು ಕೊಳ್ಳಬೇಕು. ಅದನ್ನು ಅವರಿಗೆ ಅಡಮಾನ ಮಾಡಿ ಅಪ್ಲಿಕೇಷನ್ ಹಾಕ ಬೇಕು. ಅದೆಲ್ಲಾ ಎಷ್ಟು ಕಷ್ಟ. ಸಾಂಕ್ಷನ್ ಆಗುವುದು ಎಂದಿಗೋ. ನಮ್ಮ ದು ಹಾಗಲ್ಲ. ಸೈಟಿನ ಬೆಲೆಗಿಂತ ಸ್ವಲ್ಪ ಹೆಚ್ಚು ಅಂದರೆ ಮೂರು ಸಾವಿರ ಕೊಟ್ಟರೆ ಎರಡು ತಿಂಗಳಲ್ಲಿ ನಿಮ್ಮದೇ ಮನೆ"

"ಈಗ ಎಷ್ಟು ಮನೆಗಳನ್ನು ಕಟ್ಟುತ್ತೀರಿ ?"

"ಮೊದಲು ನೂರು ಮನೆಗಳನ್ನು ಮಾತ್ರ ಕಟ್ಟುತ್ತೇವೆ. ಅದರ ಕೆಲಸ ಮುಗಿದ ಮೇಲೆ ಬೇರೆ ಆಲೋಚನೆ. ಈಗಲೇ ಎಲ್ಲಾ ಮನೆ ಗಳಿಗೂ ಅಡ್ವಾನ್ಸುಗಳು ಬಂದಿವೆ.ಒಂದೋ ಎರಡೋ ಇವೆ, ಅಷ್ಟೆ ನಿಮಗೆ ಬೇಕಾದರೆ ಈಗಲೇ ಅಡ್ವಾನ್ಸು ಕೊಟ್ಟು ಕರಾರು ಮಾಡಿಕೊಳ್ಳುವುದು ಒಳ್ಳೆಯದು."

"ಸೈಟು ನಿಮ್ಮದು. ಮನೇ ಕಟ್ಟಲು ಎಂಟು ಸಾವಿರ. ನಮ್ಮಿಂದ ಮೂರು ತೆಗೆದುಕೊಳ್ಳುತ್ತೀರಿ ಇನ್ನು ಐದು ಸಾವಿರದಂತೆ ನೀವೇ ಹಾಕಿ ನೂರು ಮನೆಗಳನ್ನು ಕಟ್ಟುತ್ತೀರೋ ?''

"ನಾವೇ ಹಾಕಿ ಕಟ್ಟಿ ಕೊಟ್ಟಂತೆಯೇ ಅನ್ನಿ. ನಾವೂ ಒಂದಿಷ್ಟು ಹಾಕುತ್ತೇವೆ. ಅನೇಕ ಮಂದಿ ಸಾಹುಕಾರರು ತಾವು ಮುಂದೆ ತಾವು ಮುಂದೆಂದು ಸಾಲ ಕೊಡಲು ಮುಂದೆ ಬಂದಿದ್ದಾರೆ ಇಂಡಿಯಾ

ಸರ್ಕಾರದವರು ತಾವು ಕೊಡುತ್ತೇವೆನ್ನುತ್ತಾರೆ. ಅದೇನು ದೊಡ್ಡ ವಿಷಯ ವಲ್ಲ, ಬಿಡಿ."

"ಟ್ರಸ್ಟ್ ಬೋರ್ಡಿನವರು ಒಪ್ಪಿದ್ದಾರೋ?"

"ಆಲೋಚನೆ ಮಾಡುವುದಾಗಿ ಹೇಳಿದ್ದಾರೆ. ಅವರೊಪ್ಪದಿದ್ದರೆ ಕೇಳುವವ್ಯಾರು? ಲೈಟ್ ಬಂದೇ ಬರುತ್ತದೆ. ರೋಡುಗಳನ್ನು ನಾವೇ ಹಾಕುತ್ತೇವೆ. ನೀರು ಕೊಡುವುದೊಂದು. ಅವರು ಕೊಡದಿದ್ದರೆ ಭಾವಿ ಗಳನ್ನು ತೋಡಿ ಪವರ್‌ನಿಂದ ನೀರೆತ್ತಿ ಸರಬರಾಜು ಮಾಡುತ್ತೇವೆ. ಇಷ್ಟೆಲ್ಲಾ ಮಾಡಿದವರು ಸುಮ್ಮನಿರುತ್ತೇವೆಯೆ? ಅಷ್ಟೆಲ್ಲಾ ಯಾಕೆ? ಕಾಲಮಹಿಮೆ ನಿಮಗೆ ಗೊತ್ತಿಲ್ಲವೇ, ಯಾರಾದರೂ ಅಸೆಂಬ್ಲಿ ಮೆಂಬರ್ ಗಳನ್ನು ಸರಿಯಾಗಿ ಹಿಡಿದರೆ ಮಾಡಿಕೊಡುತ್ತಾರೆ"

ಪಿಳ್ಳೆಯೂ ಆನಂದನು ಮಾತನಾಡುತ್ತಾ ಕುಳಿತಿದ್ದಂತೆ ಟೆಲಿಫೋನ್ ಶಬ್ದವಾಯಿತು. ರಿಸೀವರ್ ತೆಗೆದು ಕೇಳಿದೊಡನೆಯೇ ಪಿಳ್ಳೆಯ ಮುಖ ಒಂದು ತರಹವಾಯಿತು. "ಕೂಡಲೇ ಬರುತ್ತೇನೆ" ಎಂದು ಹೇಳಿ, ಆನಂದ ನನ್ನು ಕುರಿತು ಹೇಳಿದ.

"ಕ್ಷಮಿಸಬೇಕು. ನಾನು ಅರ್ಜೆಂಟಾಗಿ ಹೋಗಬೇಕಾಗಿದೆ. ಬಾಬೂರಾಯರು ನಿನ್ನೆ ರಾತ್ರಿ ಮೃತರಾದರಂತೆ"

ಆ ಮಾತು ಕೇಳಿ ಆನಂದನಿಗೆ ಆಶ್ಚರ್ಯವಾಯಿತು. ಹಿಂದಿನ ದಿನ ಸಾಯಂಕಾಲ ಹುಷಾರಾಗಿದ್ದ ಮುದುಕ ಆಗಲೇ ಗೋತಾ ಹೊಡೆದನೇ?

ಪಿಳ್ಳೆ ಎದ್ದು ಹೊರಟುಬಿಟ್ಟ. ಅವನ ಹಿಂದೆಯೇ ಆನಂದನೂ ಹೊರಟ.

## ೪

ಆನಂದನಿಗೆ ಅದೇ ಯೋಚನೆ ಮನಸ್ಸಿಗೆ ತೋರಿದ ಕಡೆ ಹೋಗು ವಂತಿಲ್ಲ. ಆದಿನ ಕೋರ್ಟಿನಲ್ಲಿ ಮುಖ್ಯವಾದುದೊಂದು ಕೇಸಿದೆ. ಕಕ್ಷಿ

ಗಾರರು ಬಂದು ಆಫೀಸಿನಲ್ಲಿ ಕಾದಿರುತ್ತಾರೆ. ಆದರೂ ಅದೇ ಯೋಚನೆ-ಮುದುಕ ಇದ್ದಕ್ಕಿದ್ದ ಹಾಗೆಯೇ ಸತ್ತನೆನ್ನುವುದು ಆಶ್ಚರ್ಯವಾಗಿತ್ತು. ವೃದ್ಧನಾದರೂ ಹಿಂದಿನ ದಿನ ಗುಂಡುಕಲ್ಲಿನಂತಿದ್ದ. ಆರೋಗ್ಯವಾಗಿದ್ದ. ಅವನನ್ನು ನೋಡಿದರೆ ನೆಗಡಿ, ಕೆಮ್ಮಲು ಸಹ ಇರುವಂತೆ ಇರಲಿಲ್ಲ. ಇಷ್ಟು ಬೇಗ ಅವನು ಸತ್ತುದುದು ಹೇಗೆ ?

ಮನಸ್ಸಿನಲ್ಲಿ ಮತ್ತೊಂದು ಚಿಂತೆಯೂ ಬಂದಿತು. ನಾರ್ತ್ ರೋಡಿನಲ್ಲಿ ಬರುತ್ತಿದ್ದವನ ಮೇಲೆ ಕಾರು ಹರಿಯುವುದರಲ್ಲಿತ್ತು. ತಾನು ಅವನನ್ನು ಉಳಿಸಿ ಮನೆಯಲ್ಲಿ ಬಿಟ್ಟು ಬಂದ ಬೀದಿಯಲ್ಲಿ ಕೊಲ್ಲಬೇಕೆಂದಿದ್ದವರು ಮನೆಯಲ್ಲಿಯೇ ಮುದುಕನನ್ನು ಕೊಂದು ಹಾಕಿದರೇನು ?

ಹಾಗೆ ಕೊಲ್ಲಲು ಕಾರಣವೇನಿರಬಹುದು ? ಯಾರಿಗೂ ತೊಂದರೆ ಮಾಡದಂತಹ ಒಳ್ಳೆಯ ಮುದುಕನವನು.

ಗಾಂಧೀನಗರದಿಂದ ನೇರವಾಗಿ ಆ ಮನೆಗೆ ಹೋಗೋಣವೆನ್ನಿಸಿತು, ಮುದುಕ ಸ್ವಾಭಾವಿಕವಾಗಿ ಸತ್ತಿದ್ದರೆ ತಾನಾಡುವ ಮಾತುಗಳಿಂದ ಏನಾದರೂ ಹೆಚ್ಚು ಕಡಿಮೆಯಾಗಬಹುದು. ಹಾಗಲ್ಲದೇ ಒಂದು ವೇಳೆ ಕೊಲೆಯೇ ಆಗಿದ್ದರೆ ಪೋಲೀಸಿನವರು ಬಂದಿರುತ್ತಾರೆ. ತಾನು ಹೋಗಿ ಈನಡುವೆ ಸಿಕ್ಕಿಹಾಕಿಕೊಂಡ ಹಾಗಾಗುತ್ತದೆ ಎಲ್ಲಿಯ ಗ್ರಹಚಾರ ? ಬೀದಿಯಲ್ಲಿ ಹೋಗುವ ಮಾರಿಯನ್ನು ಮನೆ ಹೊಕ್ಕು ಹೋಗೆಂದು ಹೇಳಿದಂತಾಗುತ್ತದೆ.

ಕೋರ್ಟಿನ ಕೆಲಸ ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ತೀರಿತು. ಮನೆಗೆ ಹೋಗಬೇಕಾಗಿದ್ದವನು ಧರ್ಮರತ್ನಾಕರರ ಮನೆಗೆ ಹೋದ.

ಹಿಂದಿನ ದಿನದ ಸಂಜೆ ಜಗುಲಿಯ ಮೇಲೆ ಕುಳಿತಿದ್ದಂತೆಯೇ ಆಶಾ ಈದಿನವೂ ಕುಳಿತಿದ್ದಳು. ಮುಖ ಸಪ್ಪಗಿತ್ತು. ವಿಷಣ್ಣವದನೆಯಾಗಿದ್ದ ಬಾಲಿಕೆಯು ಎದುರಿಗೆ ಬಂದು ನಿಂತ ಆನಂದನನ್ನು ನೋಡಿ ಪ್ರಯತ್ನ ಪುರಸ್ಸರವಾಗಿ ಮುಖದ ಮೇಲೆ ನಗುವನ್ನು ತಂದುಕೊಂಡಳು.

ಏನು ಮಾತನಾಡಬೇಕೋ ತೋರದೆ ಅಲ್ಲಿಯೇ ಇದ್ದ ಮತ್ತೊಂದು ಬೆತ್ತದ ಕುರ್ಚಿಯ ಮೇಲೆ ಕುಳಿತುಕೊಂಡ.

ಅಳಿಯೂ ಸಹ ತೋರುವಂತಹ ಸ್ಥಿತಿಯಲ್ಲಿರಲಿಲ್ಲ. ಆದರೆ ಆನಂದನ

ಮುಖ ನೋಡಿದ ಕೂಡಲೇ ಒಂದು ಭಾವನೆಯು ಮನಸ್ಸಿಗೆ ಬಂದಿತ್ತು ಅದನ್ನೇ ಅವಳು ಹೇಳಿದಳು.

"ನಿನ್ನೆಯ ದಿನ ಸಾಯಂಕಾಲ ನೀವು ತಾತನ ಪ್ರಾಣ ಉಳಿಸಿದಿರಿ. ಆದರೆ ರಾತ್ರಿಯೇ ಅವರು ಸಾಯಬೇಕಾಯಿತು. ಹಣೆಯಲ್ಲಿ ಬರೆದಿರುವುದನ್ನು ಯಾರು ತಾನೇ ತಪ್ಪಿಸಲಾಗುತ್ತದೆ"

"ಅವರು ಸತ್ತರೆಂಬುದನ್ನು ಕೇಳಿದ ಕೂಡಲೇ ನನಗೆ ದಿಗ್ಭ್ರಮೆಯಾದಂತಾಯಿತು ನಿನ್ನೆಯ ದಿನ ಸಾಯಂಕಾಲ ಚೆನ್ನಾಗಿದ್ದರು. ಬೆಳಗಾಗುವ ವೇಳೆಗೆ ಇಲ್ಲವೆಂದಾದರೆ ......."

ಮೊದಲೇ ಅವಳು ಕೇಳಬೇಕಾಗಿತ್ತು. ಈಗ ಕೇಳಿದಳು.

"ತಾತ ಸತ್ತುದು ನಿಮಗೆ ಹೇಗೆ ಗೊತ್ತಾಯಿತು"

"ಈ ದಿನ ಬೆಳಗಾಗ ಗಾಂಧೀ ನಗರಕ್ಕೆ ಹೋಗಬೇಕಾಗಿತ್ತು. ಹೋಗಿದ್ದೆ. ಆಗ ನಿಮ್ಮ ಕಂಪನಿಯ ಬೋರ್ಡು ನೋಡಿದೆ. ಏನು ವಿಷಯವೋ ನೋಡೋಣವೆಂದು ಹೋಗಿ ನೋಡಿದೆ. ಪಿಳ್ಳೆ ಎಂಬುವವರು ಇದ್ದರು. ಇಬ್ಬರೂ ಮಾತನಾಡುತ್ತಿದ್ದೆವು. ಅಷ್ಟು ಹೊತ್ತಿಗೆ ಸರಿಯಾಗಿ ಟೆಲಿಫೋನ್ ಬಂದಿತು. ಅವರು ಹೇಳಿದರು''

"ಹೌದು. ಪೋಲೀಸಿನವರು ಏನೇನೋ ಕೇಳಿದರು. ಆಗ ಈ ಕಂಪನಿಯ ವಿಷಯವನ್ನು ಹೇಳಿದೆ. ಅವರು ಪಿಳ್ಳೆಗೆ ಫೋನ್ ಮಾಡಿದರೆಂದು ಕಂಡುಬರುತ್ತದೆ"

ಮುದುಕ ಸತ್ತರೆ ಪೋಲೀಸಿನವರೇಕೆ ಬಂದಿದ್ದನು. ಹಾಗಾದರೆ ಇದರಲ್ಲಿ ಏನಾದರೂ ಒಳಸುಳಿಗಳಿವೆಯೇನು ?

"ಪೋಲೀಸಿನವರೇಕೆ ಬಂದರು''

"ನಾನೇ ಕರೆಸಿದೆ. · ಪೋಲೀಸಿನವರು ಬಂದಿದ್ದರು. ಡಾಕ್ಟರು ಬಂದು ನೋಡಿದರು. ಹೆಣವನ್ನು ಪರೀಕ್ಷೆ ಮಾಡಲು ಆಸ್ಪತ್ರೆಗೆ ತೆಗೆದುಕೊಂಡು ಹೋಗಿದ್ದಾರೆ"

"ಹಾಗಾದರೆ ಸ್ವಲ್ಪ ವಿವರವಾಗಿ ಹೇಳಿ. ಪೋಲೀಸಿನವರು ಬರಲು ಕಾರಣವೇನು ? ಪೋಸ್ಟ್ಮಾರ್ಟಂ ಮಾಡುವ ಆವಶ್ಯಕತೆ ಏನು ? ನಿಮ್ಮ ತಾತನ ಮರಣ ಅಸ್ವಾಭಾವಿಕವೆಂದು ಕಂಡದ್ದು ಹೇಗೆ ?"

"ಅದು ಒಂದು ಕೆಲಸವಾಯಿತು. ಮುದುಕರುಗಳಿಗೆ ಆಗುವಂತೆ ನಮ್ಮ ತಾತನಿಗೆ ಬೆಳಗಿನ ಜಾವ ಬಹಳ ಬೇಗ ಎಚ್ಚರವಾಗುತ್ತಿತ್ತು. ಅವರು ನನ್ನನ್ನು ಬೇಗ ಎಬ್ಬಿಸಿ ಎಬ್ಬಿಸಿ ಆರು ಗಂಟೆಯ ವೇಳೆಗಾಗಲೇ ನನಗೆ ಎಚ್ಚರವಾಗುವುದು ರೂಢಿಯಾಗಿತ್ತು. ಅದೇನೋ ಈದಿನ ಎಷ್ಟು ಹೊತ್ತಾದರೂ ಎಚ್ಚರವಾಗಲಿಲ್ಲ. ಗುಂಡಮ್ಮ ಬಂದು ಎಬ್ಬಿಸಿದಳು. ಅಷ್ಟು ಹೊತ್ತಿಗಾಗಲೇ ಎಂಟು ಗಂಟೆಯಾಗಿತ್ತು. ಅವಳು ಎಂಟು ಗಂಟೆಯಾಗಿದೆ ಎಂದಾಗ ನನಗೆ ಗಾಬರಿಯಾಯಿತು. ಅದಿರಲಿ ನನ್ನನ್ನು ಗುಂಡಮ್ಮ "ತಾತ ಈದಿನ ಇನ್ನೂ ಯಾಕೋ ಏಳಲಿಲ್ಲ" ಎಂದಳು. "ಏನೋ ಏಳಲಿಲ್ಲ. ಮಲಗಿರಲಿ ಬಿಡು. ನಿದಾನವಾಗಿ ಏಳುತ್ತಾರೆ" ಎಂದೆ. "ನಾನು ಕರೆದೆ ನಮ್ಮ; ಅವರಿಗೆ ಎಚ್ಚರವಾಗಲಿಲ್ಲ" ಎಂದಳು. ನನಗೆ ಗಾಬರಿಯಾಯಿತು. ಎದ್ದು ಹೋಗಿ ಕೂಗಿದೆ. ಎಬ್ಬಿಸಿದೆ, ಏಳಲಿಲ್ಲ"

"ಅದು ಸರಿ. ಅಂದರೆ ನೀವು ಹೋಗಿ ನೋಡುವ ಹೊತ್ತಿಗೆ ಅವರು ಮರಣಹೊಂದಿದ್ದರು. ಅಂತಹ ಸಂದರ್ಭದಲ್ಲಿ ನೀವು ನಿಮ್ಮ ಬಂಧು ಮಿತ್ರರನ್ನು ಕರೆಯುವುದು ಸಹಜ. ಇದ್ದಕ್ಕಿದ್ದ ಹಾಗೆಯೇ ನೀವು ಪೋಲೀಸಿನವರನ್ನು ಕರೆದಿದ್ದು ಯಾಕೆ ?"

"ಅದೇ. ಅದೇ ನಾನು ಹೇಳುತ್ತಿರುವುದು ? ಹಾಗೆ ಮಾಡಲು ಕಾರಣವೇನೆಂದು? "ಅವಸರ ಪಡಬೇಡಿ ಸಾವಧಾನವಾಗಿ ಕೇಳಿ ನಿನ್ನೆ ರಾತ್ರಿ ಹುಷಾರಾಗಿದ್ದ ತಾತ ಇದ್ದಕ್ಕಿದ್ದ ಹಾಗೆಯೇ ಮರಣ ಹೊಂದಿದರೆ ನನಗದು ಅಸಹಜವಾಗಿ ಕಾಣಬಾರದೆ? ನಾನು ಪಕ್ಕದ ಕೋಣೆಯಲ್ಲಿ ಮಲಗಿದ್ದೆ. ಸಾಯಲು ಮೊದಲು ಸಂಕಟವಾದರೂ ಆಗಬೇಕಿತ್ತಲ್ಲವೇ? ಆಗಿದ್ದರೆ ನನಗೆ ಎಚ್ಚರವಾಗುತ್ತಿರಲಿಲ್ಲವೆ ? ಹೊರಗಡೆ ಮಲಗಿದ್ದ ಗುಂಡಮ್ಮನಿಗಾದರೂ ಎಚ್ಚರವಾಗಬೇಡವೇ? ಸಾಧಾರಣವಾಗಿ ಅವಳಿಗೆ ಚೆನ್ನಾಗಿ ನಿದ್ದೆ ಬರುವುದೇ ಇಲ್ಲ ಸ್ವಲ್ಪ ಶಬ್ದವಾದರೂ ಎದ್ದು ಬಿಡುತ್ತಾಳೆ."

"ಹಾರ್ಟ್ ಫೈಲ್ಯೂರ್ ಆಗಿದ್ದಿರಬಹುದೆಂದು ತೋರಲಿಲ್ಲವೇ?"

"ಅದೂ ತೋರಿತು. ಅಂತೂ ಗಾಬರಿಯಲ್ಲಿ ಏನೂ ತೋರದೇ ನಮ್ಮ

ಮನೆಯ ಡಾಕ್ಟರು ಮುಕುಂದ ರಾಯರಿಗೆ ಹೇಳಿ ಕಳಿಸಿದೆ ಗುಂಡಮ್ಮ ಹೋಗಿ ಕರತಂದಳು.

"ಅವರು ಬಂದು ನೋಡಿ ನಿಮ್ಮ ತಾತ ಪೊಟಾಸಿಯಂಸೈನೇಡ್ ತೆಗೆದು ಕೊಂಡು ಸತ್ತಿದ್ದಾರೆ. ಹೆಚ್ಚು ಕಡಿಮೆಯಾಗಿ ಇದು ಆತ್ಮಹತ್ಯೆ ಕೆಳಗೆ ಬರುತ್ತದೆ. ಪೋಲಿಸಿನವರನ್ನು ಕರೆದು ವಿಷಯ ತಿಳಿಸಬೇಕು ಎಂದರು.'' ತೆರೆದಿಟ್ಟ ಪೊಟಾಸಿಯಂ ಸೈನೇಡ್ ಸೀಸೆ ಇದ್ದುದು ಅಷ್ಟು ಹೊತ್ತೂ ನನ್ನ ಕಣ್ಣಿಗೆ ಬಿದ್ದಿರಲಿಲ್ಲ"

"ಸರಿ. ಸರಿ. ಈಗ ಅರ್ಥವಾಯಿತು."

"ಪೋಲೀಸ್‌ನವರು ಬಂದು ನೋಡಿದರು. ನಮ್ಮ ಡಾಕ್ಟರು ಹೇಳಿ ದ್ದಕ್ಕೆ ಅವರೇನೂ ಅಡ್ಡಿ ಹೇಳಲಿಲ್ಲ. ಸೈನೇಡ್ ತಿಂದು ಸತ್ತಿರಬಹುದೆಂದು ಅವರು ಮಾತನಾಡಿಕೊಂಡರು. ಆದರೂ ಅವರು ಬೇರೆ ಡಾಕ್ಟರನ್ನು ಕರೆಸಿ ಪರೀಕ್ಷೆ ಮಾಡಿಸಿದರು. ಅವರೂ ಅದೇ ಅಭಿಪ್ರಾಯಪಟ್ಟರು. ಆದರೆ ಶವ ವನ್ನು ಪರೀಕ್ಷೆ ಮಾಡಲೇಬೇಕೆಂದು ನಮ್ಮ ತಾತನ ದೇಹವನ್ನು ಆಸ್ಪತ್ರೆಗೆ ತೆಗೆದುಕೊಂಡು ಹೋದರು.''

"ನೀವು ಆಸ್ಪತ್ರೆಗೆ ಹೋಗಲಿಲ್ಲವೇ ?"

"ಹೋಗಿದ್ದೆ. ಪರೀಕ್ಷೆ ಮಾಡುತ್ತಿದ್ದ ಸ್ಥಳಕ್ಕೆ ಬಿಡಲಿಲ್ಲ. ಸುಮಾರು ಒಂದು ಗಂಟೆಯ ವೇಳೆಗೆ ಅಲ್ಲಿಯೇ ಇದ್ದ ಪೋಲೀಸ್ ದಫೇದಾರನೊಬ್ಬನು "ಈಗ ಮುಗಿಯುವುದಿಲ್ಲ, ತಾಯಿ. ಪರೀಕ್ಷೆ ಮುಗಿಯುವುದು ಸಾಯಂಕಾಲ ವಾಗುತ್ತದೆ. ನೀವು ಕಾರ್ಯವೇನಿದ್ದರೂ ನಾಳೆಯೇ ಮಾಡಿಕೊಳ್ಳಬೇಕಾ ಗುತ್ತದೆ. ಮನೆಗೆ ಹೋಗಿ ಊಟ ಮಾಡಿ. ಇದು ಮುಗಿದ ಕೂಡಲೇ ಯಾರಾದರೂ ಕಾನ್ಸ್ಟೇಬಲ್‌ನನ್ನು ಕಳಿಸುತ್ತೇನೆ"ಎಂದ. ನಾನೂ ಗುಂಡಮ್ಮ ಮನೆಗೆ ಬಂದೆವು. ಅಡಿಗೆಯಾಗಿ ಊಟ ಮಾಟಬೇಕಾದರೆ ಇಷ್ಟು ಹೊತ್ತಾ ಯಿತು. ಕಾನ್ಸ್ಟೇಬಲ್ ಬರಲಿಲ್ಲವಲ್ಲ. ನಾನೇ ಆಸ್ಪತ್ರೆಗೆ ಹೋಗೋಣ ವೆಂದು ಯೋಚನೆ ಮಾಡುತ್ತಿದ್ದೆ. ಅಷ್ಟು ಹೊತ್ತಿಗೆ ಸರಿಯಾಗಿ ನೀವು ಬಂದಿರಿ".

"ಬನ್ನಿ. ಆಸ್ಪತ್ರೆಗೆ ಹೋಗಿ ನೋಡೋಣ"

"ಹೋಗೋಣ. ಮಧ್ಯಾಹ್ನದಿಂದ ನನಗೊಂದು ಹೊಸ ಯೋಚನೆ ಬರುತ್ತಿದೆ''.

ಆನಂದ್ ಆಸಕ್ತಿಯಿಂದ ಅದೇನು ಎಂಬಂತೆ ನೋಡಿದ.

"ಇದ್ದಕ್ಕಿದ್ದಂತೆಯೇ ನಮ್ಮ ತಾತ ಪೊಟಾಸಿಯಂ ಸೈನೇಡ್ ಯಾಕೆ ತೆಗೆದುಕೊಂಡರು ಅಂತ .... ...."

ಅವಳು ಮಾತು ಮುಗಿಸುವುದರಲ್ಲಿ ಆನಂದ ಪ್ರಶ್ನಿಸಿದ.

"ಅಲ್ಲಾ. ನಿನ್ನೆಯ ದಿನ ಸಾಯಂಕಾಲ ಖುಷಿಯಾಗಿದ್ದ ನಿಮ್ಮ ತಾತ ಇದ್ದಕ್ಕಿದ್ದಂತೆಯೇ ವಿಷ ಯಾಕೆ ತೆಗೆದುಕೊಂಡರು"?

"ಅದೇ ನನಗೂ ಯೋಚನೆಯಾಗಿರುವುದು ?''

"ಪೋಲೀಸಿನವರಿಗೆ ಇದನ್ನು ಹೇಳಿದಿರಾ?''

''ಅವರು ಕೇಳಲಿಲ್ಲ. ನಾನೂ ಹೇಳುವುದನ್ನು ಮರೆತುಬಿಟ್ಟೆ. ಈಗ ನನ್ನ ಮನಸ್ಸಿಗೆ ಬಂದಿರುವ ಆಲೋಚನೆ ಏನು ಎಂಬುವನ್ನು ನೀವು ಕೇಳಲೇ ಇಲ್ಲವಲ್ಲ.''

"ಹೇಗೆ, ಹೇಳಿ ಮಾತು ಬೇರೇ ಕಡೆಗೆ ತಿರುಗಿತು.''

"ವಿಷ ತಿಂದು ಸಾಯಬೇಕಾದ ಕಷ್ಟ ನಮ್ಮ ತಾತನಿಗೆ ಏನು ಬಂದಿದ್ದುದು ಅಂತ".

''ನೀವು ಹೇಳುವುದನ್ನು ಸ್ಪಷ್ಟವಾಗಿ ಹೇಳಿ."

''ಹಾಗಾದರೆ ಯಾರಾದರೂ ಬಲಾತ್ಕಾರವಾಗಿ ಬಾಯಲ್ಲಿ ಗಿಟುಕರಿಸಿ ತಿನ್ನಿಸಿದರು ಎನ್ನುತ್ತೀರೇನು ?

''ಇಲ್ಲ-ಇಲ್ಲ. ಹಾಗೆನ್ನುವುದಕ್ಕೆ ಕಾರಣವೇ ಇಲ್ಲ. ಬೆಳಗ್ಗೆ ನಮ್ಮ ತಾತನ ಹೆಣ ನೋಡಬೇಕಿತ್ತು. ನಿದ್ದೆ ಮಾಡುತ್ತಿರುವಂತಿತ್ತು. ಒಂದು ವೇಳೆ ನೀವು ಹೇಳುವ ಹಾಗಿದ್ದರೆ ಪರೀಕ್ಷೆಮಾಡಿದ ಇಬ್ಬರು ಡಾಕ್ಟರುಗಳಿಗೂ ಬಂದಿದ್ದ ಅಷ್ಟೊಂದು ಜನ ಪೋಲೀಸಿನವರಿಗೂ ಗೊತ್ತಾಗದೆ ಇರುತ್ತಿತ್ತೇ?''

ಅಂತಹ ಸಮಯದಲ್ಲಿಯೂ ನಗುತ್ತಾ ಆನಂದ್ ಎಂದ.

''ನೀವ್ಯೊಕ್ಕೆ ವಿಚಿತ್ರವಾಗಿ ಮಾತನಾಡುತ್ತೀರಿ, ಆಶಾದೇವಿ. ನಿಮ್ಮ ತಾತನ ಸಾವು ಸ್ವಾಭಾವಿಕವಲ್ಲವೆನ್ನುತ್ತೀರಿ. ಇನ್ನೇನಾಗಿರಬೇಕು? ಆತ್ಮಹತ್ಯೆ. ಅದಕ್ಕೆ ಕಾರಣವಿಲ್ಲವೆಂದು ಖಚಿತವಾಗಿ ಹೇಳುತ್ತೀರಿ. ಇದೊಂದೂ

ಅಲ್ಲದಿದ್ದರೆ ಕೊಲೆಯಾಗಿರಬೇಕಲ್ಲವೆ ?"

"ನಾನು ಹೇಳಿದ್ದು ನಿಮ್ಮ ಮನಸ್ಸಿಗೆ ಬರಲಿಲ್ಲ"

"ಅದೇ ಬರಲಿಲ್ಲ. ಹೇಳಿ"

"ಉದ್ದೇಶಪೂರ್ವಕವಾಗಿ ಅವರು ವಿಷ ತೆಗೆದುಕೊಂಡು ಆತ್ಮಹತ್ಯೆ ಮಾಡಿಕೊಳ್ಳಲು ಕಾರಣವಿಲ್ಲ"

"ಹೇಳಿ, ಹೇಳಿ"

"ಅಷ್ಟೇ. ನಾನು ಹೇಳುವುದು. ಈ ವಿಷಯ ವಿಚಿತ್ರವಾಗಿ ಕಾಣುವುದಿಲ್ಲವೆ ?"

"ಕಾಣುತ್ತದೆ. ಪೋಸ್ಟ್‌ಮಾರ್ಟಂ ರಿಪೋರ್ಟು ಬಂದು, ಪೋಲೀಸಿನವರು ಏನು ಹೇಳುತ್ತಾರೆಂದು ಕೇಳುವವರೆವಿಗೆ ಏನು ಹೇಳುವುದಕ್ಕೂ ಆಗುವುದಿಲ್ಲ"

"ಪೋಸ್ಟ್‌ಮಾರ್ಟಂ ರಿಪೋರ್ಟು ಬಂದು, ಪೋಲೀಸಿನವರು ಹೇಳುವುದರಲ್ಲಿ ಸಾಯಂಕಾಲದವರೆಗೆ ಆಗುತ್ತದೆ. ಅದಕ್ಕೂ ನಾನು ಹೇಳುವುದಕ್ಕೂ ಏನು ಸಂಬಂಧ ?"

"ಯಾಕೆ ಸಂಬಂಧವಿಲ್ಲ? ನಿಮ್ಮ ತಾತ ಇಂತಹ ಕಾರಣದಿಂದಲೇ ಸತ್ತರೆಂಬುದು ಪೋಸ್ಟ್‌ಮಾರ್ಟಂ ರಿಪೋರ್ಟಿನಿಂದ ಗೊತ್ತಾಗುತ್ತದೆ"

"ಮರಣಕ್ಕೆ ಪೊಟಾಷಿಯಂ ಸೈನೈಡೇ ಕಾರಣವೆಂದು ಖಚಿತವಾಗಿದೆಯಲ್ಲ. ಹಾಗವರು ಉದ್ದೇಶಪೂರ್ವಕವಾಗಿ ತೆಗೆದುಕೊಳ್ಳಲು ಕಾರಣವೇನು ?"

"ಅದನ್ನು ನೀವು ಹೇಳಬೇಕು. ಅವರಿಗೆ ಯಾವುದಾದರೂ ಕಷ್ಟವಿತ್ತೆ ? ಮನಸ್ಸಿಗೆ ಬೇಜಾರಾಗಿತ್ತೇ ?

"ಅದೇ ನನಗೆ ಆಶ್ಚರ್ಯವನ್ನುಂಟುಮಾಡುವುದು"

"ಪೋಲೀಸಿನವರಿಗೆ ಹೇಳಿ ನೋಡೋಣ. ಆತ್ಮಹತ್ಯೆಗೆ ಕಾರಣವೇನೆಂದು ತಿಳಿದುಕೊಳ್ಳಲು ಅವರಿಗೂ ಆಸಕ್ತಿ ಇರುತ್ತದೆ"

ಒಂದು ಗಳಿಗೆಯ ಹೊತ್ತು ಆಲೋಚನೆ ಮಾಡಿ ಆನಂದ್ ಹೇಳಿದ.

"ಅದು ಪ್ರಯೋಜನವಿಲ್ಲ"

"ಯಾಕೆ ?"

"ಅವರೂ ಸ್ವಲ್ಪ ಕೆದಕಿ ನೋಡುತ್ತಾರೆ. ಯಾಕೆ ಆತ್ಮಹತ್ಯೆ ಮಾಡಿ

ಕೊಂಡರೋ ಅದರಲ್ಲಿ ಅವರಿಗೆ ಆಸಕ್ತಿ ಏನು ? ನೀವು ಹೇಳುವಷ್ಟು ಮುಖ್ಯ ವಾಗಿ ಅವರದನ್ನು ಪರಿಗಣಿಸುವುದಿಲ್ಲ. ಅರಳು ಮರಳು. ಏನೋ ಮಾಡಿ ಕೊಂಡ ಎಂದುಕೊಳ್ಳುತ್ತಾರೆ.

"ಅರಳು ಮರಳು ! ಅದನ್ನು ನಾನು ಒಪ್ಪುವುದಿಲ್ಲ"

"ನನಗೊಂದು ಆಲೋಚನೆ ತೋರುತ್ತದೆ, ಆಶಾದೇವಿ"

"ಅದೇನು ಹೇಳಿ"

"ಈ ಊರಲ್ಲಿ ಸಂಪತ್ ಎಂಬೊಬ್ಬ ಖಾಸಗೀ ಪತ್ತೇದಾರರಿದ್ದಾರೆ. ಅವರು ನನಗೆ ಪರಿಚಿತಸ್ಥರು. ಅವರಿಗೆ ಹೇಳಿ ನೋಡುತ್ತೇನೆ"

"ಅವರೇನು ಮಾಡುತ್ತಾರೆ'

"ನಿಮ್ಮ ತಾತ ಆತ್ಮಹತ್ಯೆಯನ್ನು ಮಾಡಿಕೊಂಡಿದ್ದರೆ ಅದಕ್ಕೆ ಕಾರಣ ವೇನೆಂಬುದನ್ನು ಹುಡುಕಿ ಪತ್ತೆ ಮಾಡುತ್ತಾರೆ"

"ಎಷ್ಟು ಹಣ ಕೇಳುತ್ತಾರೋ ?"

"ನನ್ನ ಸ್ನೇಹಿತರಾದ್ದರಿಂದ ಹೇಳಿಸುತ್ತೇನೆ"

"ಹಾಗೆ ಬೇಡ. ಅದಕ್ಕೇನಾಗುತ್ತದೋ ಕೊಡುತ್ತೇನೆ. ಆದರೆ ಎಷ್ಟು ಕೊಡಬೇಕೆಂಬುದು ನನಗೆ ಗೊತ್ತಾಗಬೇಕು"

ಆನಂದ್ ನಗುತ್ತ ಪ್ರಶ್ನಿಸಿದ.

"ನೀವೆಷ್ಟು ಕೊಡಬಲ್ಲಿರಿ ?"

"ಎಷ್ಟಾದರೂ ಕೊಡಬಲ್ಲೆ. ನಮ್ಮ ತಾತ ನನಗೇನು ಕಡಿಮೆ ಮಾಡಿಲ್ಲ. ಈ ಮನೆ ಇದೆ. ಇದರ ಪಕ್ಕದಲ್ಲಿ ಎರಡು ಮನೆಗಳು ನಮ್ಮವೇ ? ಯಡತೊರೆಯಲ್ಲಿ ಜಮೀನಿದೆ. ಆದರೆ ಇದರ ಮೇಲೆ ಸಿಕ್ಕಾಪಟ್ಟೆ ಖರ್ಚು ಮಾಡಲು ತಯಾರಾಗಿಲ್ಲ, ಅಷ್ಟೆ"

"ನೀವೇ ಕೊಡುವಿರಂತೆ. ನ್ಯಾಯವಾದದ್ದಕ್ಕಿಂತ ಹೆಚ್ಚಾಗಿ ಖರ್ಚು ಮಾಡಿಸುವುದಿಲ್ಲ, ಬಿಡಿ"



ಅಷ್ಟು ಹೊತ್ತೂ ಆನಂದ್ ಹೇಳಿದುದನ್ನು ಕೇಳಿ ಪತ್ತೇದಾರ ಸಂಪತ್ ನಕ್ಕು ಅಂದ.

"ನೀವು ಹೇಳುವುದು ವಿಚಿತ್ರವಾಗಿದೆ. ಮುದುಕ ವಿಷ ತೆಗೆದುಕೊಂಡು ಪ್ರಾಣ ಬಿಡಬೇಕಾದ ಪ್ರಮೇಯವೇ ಇಲ್ಲ. ಅವರೇ ತೆಗೆದುಕೊಂಡಿದ್ದಾನೆ"

"ಹಾಗಾದರೆ ತಮಗೆ ವಿಷಯ ಅರ್ಥವಾಗುವಂತೆ ನಾನು ಹೇಳಲಿಲ್ಲ ವೆಂದಾಯಿತು. ತನ್ನ ತಾತ ಉದ್ದೇಶಪೂರ್ವಕವಾಗಿಯೇ ಆತ್ಮಹತ್ಯೆ ಮಾಡಿ ಕೊಂಡಿದ್ದಿರಬಹುದೆಂದು ಆಶಾದೇವಿ ಹೇಳುತ್ತಾರೆ. ಆತ್ಮಹತ್ಯೆ ಮಾಡಿಕೊಳ್ಳು ವಂತಹ ಕಾರಣವೇನಿದ್ದಿರಬಹುದೆಂದು ತಿಳಿದುಕೊಳ್ಳಲು ಅಪೇಕ್ಷಿಸುತ್ತಾಳೆ."

ಸ್ವಲ್ಪ ಹೊತ್ತು ಆಲೋಚಿಸಿ ಸಂಪತ್ ಪ್ರಶ್ನಿಸಿದ.

"ಅದಿರಲಿ. ಈ ದಿನ ಬೆಳಿಗ್ಗೆ ಆಶಾದೇವಿಗೆ ಮಾಮೂಲು ಹೊತ್ತಿಗೆ ಎಚ್ಚರವಾಗಲಿಲ್ಲ ಎಂದಿರಲ್ಲ. ಅದೇಕೆ"

ಪತ್ತೇದಾರನ ಸಂದೇಹ ದೃಷ್ಟಿಯು ಆಶಾದೇವಿಯ ಮೇಲೆಯೇ ಬಿದ್ದಿತೋ ಎಂದು ಅಳುಕಿದ ಮನಸ್ಸಿನಿಂದ ಆನಂದ್ ಕೇಳಿದ.

"ನಾನು ಅದನ್ನು ವಿಚಾರಿಸಲಿಲ್ಲ. ಬೇಗೆ ನಿಧಾನವಾಗಿ ಎದ್ದುದರಲ್ಲಿ ಏನಾದರೂ ವಿಶೇಷವಿದೆ ಎಂದು ಭಾವಿಸುತ್ತೀರೇನು ?"

"ಹಾಗೇನೂ ಇಲ್ಲ. ದಿನವೂ ಆರು ಗಂಟೆಗೇ ಏಳುತ್ತಿದ್ದಾಕೆ ಈ ದಿನ ಎರಡು ಗಂಟೆ ಹೊತ್ತಾಗಿ ಎದ್ದರೆಂಬುದು ವಿಚಿತ್ರವಾಗಿ ಕಾಣುತ್ತದೆ"

"ಸರಿ. ಈಗೇನು ಮಾಡಬೇಕೆನ್ನುತ್ತೀರಿ? "

"ನೀವು ಹೇಳುವುದು ಕೇಳುತ್ತಿದ್ದೇನೆ. ಧರ್ಮಾ ರತ್ನಾ ಕ ರ ಬಾಬೂ ರಾಯರು ಆತ್ಮಹತ್ಯೆ ಮಾ ಡಿ ಕೊ ಳ್ಳ ಲು ಕಾರಣವೇನೆಂಬುದನ್ನು ಪತ್ತೇ ಮಾಡಬೇಕೆನ್ನುತ್ತೀರಿ. ಮಾಡಬೇಕು ಎಂದರೆ ಮಾಡುತ್ತೇನೆ. ಬಹು ಮಟ್ಟಿಗೆ ನಾನು ಸ್ವೀಕರಿಸಿದಂತಹ ಕೆಲಸಗಳಲ್ಲಿ ಯಶಸ್ವಿಯಾಗೇ ಇದ್ದೇನೆ"

"ನೀವು ಯಶಸ್ವಿಗಳಾಗುವುದರಲ್ಲಿ ಸಂದೇಹವೇ ಇಲ್ಲ. ನಿಮ್ಮ ಕೀರ್ತಿಯ ನಾನು ಕಾಣೆನೇ? ತಾವು ಈ ಕಾರ್ಯವನ್ನು ಸ್ವೀಕರಿಸಲೇ ಬೇಕು"

"ಹಾಗಾದರೆ ನಾನೇ ಆನಾದೇವಿಯನ್ನು ನೋಡಿ ಒಂದೆರಡು ಮಾತು ಗಳನ್ನಾಡಲು ಅಪೇಕ್ಷಿಸುತ್ತೇನೆ"

"ಓಹೋ. ಅಗತ್ಯವಾಗಿ ಆಗಬಹುದು"

"ಯಾವಾಗ ಹೋಗೋಣ"

"ಈಗಲೇ ಹೋಗೋಣ, ನಡೆಯಿರಿ"

ಸಂಪತ್ ಎದ್ದ. ಇಬ್ಬರೂ ಬಾಗಿಲಿನ ಕಡೆಗೆ ಹೊರಟರು. ಅಷ್ಟು ಹೊತ್ತೂ ಅವರಾಡುತ್ತಿದ್ದ ಮಾತು ಕೇಳುತ್ತಾ ಕುಳಿತಿದ ಸುಂದರ್ ಬಂದು ಕೇಳಿದ.

"ಏನು, ಸಂಪತ್, ನಾನೂ ಬರಲೋ ಅಥವಾ ಗೌರಮ್ಮನಂತೆ ಇಲ್ಲಿಯೇ ಕುಳಿತಿರಬೇಕೆನ್ನುತ್ತೀರೋ ?"

"ಅಯ್ಯೋ ! ನೀನಿಲ್ಲದೇ ಉಂಟೆ ? ಬಾಪ್ಪ"

ಅನಂತರ ಆನಂದ್‌ಗೆ ಸುಂದರನ ಪರಿಚಯ ಮಾಡಿಸುತ್ತಾ ಹೇಳಿದ.

"ಇವರನ್ನು ನಿಮಗೆ ಪರಿಚಯ ಮಾಡಿಸುವುದು ಮರೆತು ಬಿಟ್ಟಿದ್ದೆ ನೋಡಿ ಇವನು ಸುಂದರ್ ಅಂತ, ನನ್ನ ಭಾವಮೈದ. ಅರ್ಧಾಂಗಿ ನನ್ನ ಹೆಂಡತಿಯಾದರೂ ಬಿಟ್ಟಿರುತ್ತಾಳೆ. ಇವನು ಮಾತ್ರ ಬಿಡದೇ ಅರ್ಧಾಂಗನ ಹಾಗೆ ಗಂಟು ಬಿದ್ದಿದ್ದಾನೆ"

ಕಾರು ಡ್ರೈವ್ ಮಾಡುತ್ತಾ ಹಿಂತಿರುಗಿ ನೋಡಿ ಆನಂದನನ್ನು ಉದ್ದೇಶಿಸಿ ಸುಂದರ್ ಕೇಳಿದ.

"ನೀವು ಹೇಳುತ್ತಿದ್ದುದನ್ನೆಲ್ಲಾ ಕೇಳಿದೆ. ನಿಮ್ಮ ಧರ್ಮರತ್ನಾಕರರ ಮನೆಯಲ್ಲಿ ಅವರೂ ಅವರ ಮಗಳೂ ಮಾತ್ರ ಇದ್ದಾರೆಂದು ಹೇಳುತ್ತಿದ್ದಿರಿ. ಆನಾದೇವಿ ಹೇಗೆ ಮೊಮ್ಮಗಳು"

"ಮಗಳ ಮಗಳಂತೆ"

"ಇನ್ನಾವ ಬಂಧುಗಳೂ ಇಲ್ಲದೇ ಈ ತಾತ ಮೊಮ್ಮಗಳು ಮಾತ್ರ ಒಟ್ಟಿಗಿರುವುದು ಆಶ್ಚರ್ಯವಾಗಿದೆಯಲ್ಲ"

"ನಾನು ವಿಚಾರಿಸಿದ್ದರಲ್ಲಿ ಅವರಿಗೆ ಹತ್ತಿರದ ಬಂಧುಗಳಾರೂ ಇಲ್ಲ. ದೂರದ ಬಂಧುಗಳು ಯಾವುದೋ ಊರಿನಲ್ಲಿದ್ದಾರಂತೆ. ತಾತ ಸತ್ತಿದ್ದಾರೆಂದೂ ಬರಬೇಕೆಂದೂ ಅಲ್ಲಿಗೆ ತಂತೀ ಕೊಟ್ಟಿರುವುದಾಗಿ ಆಕೆ ಹೇಳಿದರು".

"ನಿಮ್ಮ ಆಶಾದೇವಿಗೆ ಮದುವೆಯಾಗಿದೆಯೇನು?"

"ನಾನು ಕೇಳಲಿಲ್ಲ. ನೋಡಿದ್ದರಲ್ಲಿ ಇಲ್ಲವೆಂದೇ ಹೇಳಬಹುದು. ಮದುವೆಯಾಗಿದ್ದರೆ ಗಂಡ ಮನೆಯಲಿಲ್ಲದೇ ಇರುತ್ತಿದ್ದಳೇ?"

ಇವರು ಮೂರು ಮಂದಿಯೂ ಧರ್ಮರತ್ನಾಕರರ ಮನೆಗೆ ಹೋದಾಗ ಆಶಾದೇವಿಯೊಬ್ಬಳೇ ಇದ್ದಳು. ಆನಂದ್ ನೋಡಿದ್ದರಲ್ಲಿ ಮಧ್ಯಾಹ್ನ ಕೊಂಚ ಆಕೆ ಸಪ್ಪೆಗಾಗಿದಳು. ಈಗ ಗಾಬರಿಯಾಗಿರುವಂತೆ ಕಂಡು ಬರುತ್ತಿದ್ದಳು.

ಆನಂದ್ ಅವರಿಗೆಲ್ಲಾ ಪರಸ್ಪರ ಪರಿಚಯ ಮಾಡಿಕೊಟ್ಟ. ಆದಾದ ಕೂಡಲೇ ಸಂಪತ್ ಕೇಳಿದ.

"ನಿಮ್ಮ ತಾತನವರು ಮೃತರಾದ ಕೋಣೆ ಯಾವುದು."

"ಅದಾವುದೆಂದು ತೋರಿಸುತ್ತೇನೆ. ಆದರೆ ಸ್ವಲ್ಪ ಹೊತ್ತಿನ ಮೊದಲು ಪೋಲೀಸಿನವರು ಬಂದು ಆ ಕೋಣೆಗೆ ಬೀಗ ಹಾಕಿಕೊಂಡುಹೋದರು."

ಮೂರು ಮಂದಿಯೂ ಚಕಿತರಾದರು. ಸಂಪತ್ತನೇ ಪ್ರಶ್ನಿಸಿದ.

"ಯಾಕೆ? ಏನಾದರೂ ಹೊಸ ಸಮಾಚಾರ ಸಿಕ್ಕಿದೆಯೇನು?"

"ಮಧ್ಯಾಹ್ನ ಆನಂದರು ಇಲ್ಲಿಗೆ ಬಂದಿದ್ದಾಗ ಆಸ್ಪತ್ರೆಗೆ ಹೋಗುವುದಾಗಿ ಹೇಳಿದ್ದೆ. ನಾನೂ ಗುಂಡಮ್ಮ ಹೊರಡುವುದರಲ್ಲಿದ್ದಾಗ ವ್ಯಾನೊಂದರಲ್ಲಿ ಪೋಲೀಸಿನವರು ಬಂದರು. ಬೆಳಗ್ಗೆ ಬಂದಿದ್ದವರಲ್ಲದೇ ಹೊಸ ಇನ್ಸ್ಪೆಕ್ಟರೊಬ್ಬರು ಬಂದಿದ್ದರು."

ಸಂಪತ್ ಆಕೆ ಹೇಳುವುದನ್ನು ನೋಡುತ್ತಾ ನಿಂತಕೊಂಡ. ಏನೂ ಮಾತನಾಡಲಿಲ್ಲ.

"ಟೇಪು ತೆಗೆದುಕೊಂಡು ಅಳತೆ ಪತ್ತೆ ನೋಡಿದರು. ರೂಮಿನ ಫೋಟೋಗಳನ್ನು ತೆಗೆದುಕೊಂಡರು. ಕೋಣೆಗೆ ಬೀಗ ಹಾಕಿಕೊಂಡು ಹೊರಟುಹೋದರು."

ಕೋಣೆಯನ್ನು ಹೊರಗಡೆಯಿಂದಲೇ ನೋಡಲು ಸಂಪತ್ ಅಪೇಕ್ಷಿಸಿದ. ಆಶಾ ಕರೆದುಕೊಂಡು ಹೋಗಿ ಬೀಗ ಹಾಕಿದ್ದ ಕೋಣೆಯನ್ನು ತೋರಿಸಿದಳು. ಅದರ ಪಕ್ಕದಲ್ಲಿ ತಾನು ಮಲಗಿದ್ದ ರೂಂ ತೋರಿಸಿದಳು. ಹಜಾರದಲ್ಲಿ ಗುಂಡಮ್ಮ ಮಲಗಿಕೊಳ್ಳುವ ಜಾಗವನ್ನು ನಿರ್ದೇಶನ ಮಾಡಿದಳು.

ಅವುಗಳನ್ನು ನೋಡಿದ್ದಲ್ಲದೇ ಮನೆಯ ಇತರ ಪ್ರದೇಶಗಳನ್ನು ನೋಡಿ

ಕೊಂಡು ಬಂದು ಸಂಪತ್ ಪ್ರಶ್ನಿಸಿದ.

"ಅಕಸ್ಮಾತ್ ಮತ್ಯಾರಾದರೂ ಬಂದು ನಿಮ್ಮ ತಾತನಿಗೆ ಬಲಾತ್ಕಾರವಾಗಿ ವಿಷ ತಿನ್ನಿಸಿದರು– ಎಂದುಕೊಳ್ಳೋಣ. ಕೊಲೆ ಮಾಡಿರಬಹುದಾದ ವ್ಯಕ್ತಿ ಮನೆಯನ್ನು ಹೇಗೆ ಪ್ರವೇಶಿಸಿರಬಹುದೆಂದು ಊಹೆ ಮಾಡುತ್ತೀರಿ?"

"ಮನೆಯ ಬಾಗಿಲುಗಳೆಲ್ಲವೂ ಹಿಂದಿನ ರಾತ್ರಿ ತಾನು ನೋಡಿದಂತೆಯೇ ಇದ್ದುವೆಂದು ಗುಂಡಮ್ಮ ಹೇಳಿದಳು. ದಿನವೂ ಮಲಗಿಕೊಳ್ಳುವ ಮೊದಲು ಎಲ್ಲಾ ಬಾಗಿಲುಗಳನ್ನು ನೋಡಿ ಅವಳು ಮಲಗಿಕೊಳ್ಳುತ್ತಾಳೆ. ತಾತ ಮಲಗಿದ್ದ ಕೋಣೆಗೆ ಹೊರಗಿನಿಂದ ಯಾರಿಗೂ ಗೊತ್ತಾಗದಂತೆ ಒಳಗೆ ಬರುವ ಬಾಗಿಲೊಂದಿದೆ. ಅದು ಹಾಕಿರಲಿಲ್ಲವೆಂದು ಪೋಲೀಸಿನವರು ಮಾತನಾಡಿಕೊಳ್ಳುತ್ತಿದ್ದಂತಿತ್ತು"

ಮನೆಯ ಹೊರಗಡೆ ಹೋಗಿ ಸಂಪತ್ ಆ ಬಾಗಿಲು ನೋಡಿದ. ಮೂವರೂ ಅವನೊಂದಿಗೆ ಹೋದರು. ಬಾಬೂರಾಯರ ಶಯನ ಗೃಹಕ್ಕೆ ಎರಡು ಬಾಗಿಲುಗಳು. ಒಂದು ಮನೆಯೊಳಗೆ ಹೋಗುವಂತಹದು. ಮತ್ತೊಂದು ತೋಟದೊಳಗೆ ಹೋಗುವಂತಹದು.

ಪುನಃ ಒಳಗೆ ಬರುತ್ತಾ ಸಂಪತ್ ಕೇಳಿದ.

"ನಿಮ್ಮ ತಾತ ಈ ಬಾಗಿಲನ್ನೇನಾದರೂ ಉಪಯೋಗಿಸುತ್ತಿದ್ದರೋ ?"

"ಇಲ್ಲ. ಬಹಳ ಹಿಂದೆ ಉಪಯೋಗಿಸುತ್ತಿದ್ದರಂತೆ. ನಾಟಕ ಮುಗಿಸಿಕೊಂಡು ಅವರು ಮನೆಗೆ ಬಂದರೆ ಬಾಗಿಲು ತೆಗೆಯಲು ನಮ್ಮಜ್ಜಿಗೆ ಎಚ್ಚರವಾಗುತ್ತಿರಲಿಲ್ಲವಂತೆ. ಅವರಿಗೇಕೆ ತೊಂದರೆ ಅಂತ ಈ ಬಾಗಿಲಿಡಿಸಿದುದಾಗಿ ಹೇಳುತ್ತಿದ್ದರು".

"ಆ ಬಾಗಿಲನ್ನು ನಿನ್ನೆ ನಿಮ್ಮ ತಾತನಾಗಲೀ, ಇನ್ಯಾರಾದರೂ ಆಗಲಿ ತೆಗೆದಿದ್ದಿರಬಹುದೇ ?"

"ಇಲ್ಲ. ತೆಗೆಯಲು ಕಾರಣವೇ ಇಲ್ಲ. ನನಗೆ ಜ್ಞಾಪಕವಿದ್ದಂತೆ ನಮ್ಮ ತಾತ ಅದನ್ನು ಉಪಯೋಗಿಸುತ್ತಲೇ ಇರಲಿಲ್ಲ".

"ನಿಮ್ಮ ತಾತನಿಗೆ ಆಗದವರು ಯಾರಾದರೂ ಇದ್ದಾರೆಯೇ, ಆಲೋಚಿಸಿ."

"ನಮ್ಮ ತಾತನಿಗೆ ಆಗದವರು ಯಾರೂ ಇಲ್ಲ. ಅವರು ಸಣ್ಣದೊಂದು ಇರುವೆಯನ್ನು ಸಹ ನೋಯಿಸಿದವರಲ್ಲ."

ಸಂಪತ್ ನೋಡಿ ಮಾತನಾಡಿದ್ದೆಲ್ಲವೂ ಮುಗಿದವನಂತೆ ಹೊರಗಡೆಗೆ ಬಂದ. ಜಗುಲಿಯ ಮೇಲೆ ನಿಂತಿದ್ದಾಗ ಕೇಳಿದ.

"ಒಂದೇ ಒಂದು ಪ್ರಶ್ನೆ, ಆನಂದ್‌ದೇವಿ"

"ಎಷ್ಟು ಬೇಕಾದರೂ ಕೇಳಿ. ನನಗೆ ಗೊತ್ತಿರುವುದನ್ನೆಲ್ಲಾ ಹೇಳುತ್ತೇನೆ. ನಮ್ಮ ತಾತನನ್ನು ಕೊಲೆ ಮಾಡಿದ ಪಾಪಿಗಳು ಪತ್ತೆಯಾಗಿ ಅವರಿಗೆ ಶಿಕ್ಷೆಯಾಗಲು ನನ್ನಿಂದಾಗುವುದೆಲ್ಲವನ್ನೂ ಮಾಡಲು ತಯಾರಾಗಿದ್ದೇನೆ".

ಮೊದಲಿವಳು ಮಾತನಾಡುತ್ತಿದ್ದಾಗ ಮಾತಿನಲ್ಲಿ ದುಃಖವು ಕಂಡು ಬರುತ್ತಿತ್ತು. ಈಗ ಕ್ರೋಧದಿಂದ ಜ್ವಲಿಸುತ್ತಾ ಹೇಳಿದಳು.'

"ನಿನ್ನೆಯ ದಿನ ನಿಮ್ಮ ಮನೆಗೆ ಯಾರು ಯಾರು ಬಂದಿದ್ದರು?"

"ಬೆಳಗಿನಿಂದ ಮನೆಗೆ ತಿಳಿದಂತೆ ಯಾರೂ ಬಂದಿರಲಿಲ್ಲ. ಸಾಯಂಕಾಲ ಆನಂದರು ಬಂದಿದ್ದರು. ಆ ಮೇಲೆ ರಾತ್ರಿ ಪಿಳ್ಳೆಯವರು ಬಂದಿದ್ದರು"

"ಪಿಳ್ಳೆಯವರು ಯಾರು ?"

ಧರ್ಮರತ್ನಾಕರರು ವೈಯ್ಯಾಳೀ ಕಾವಲ್ ಹೌಸ್ ಬಿಲ್ಡಿಂಗ್ ಕಂಪನಿಯನ್ನು ಮಾಡಿದ್ದಾರೆಂದೂ ಪಿಳ್ಳೆಯವರು ಅದರ ಕಾರ್ಯದರ್ಶಿಗಳೆಂದೂ ಆನಂದ್ ಹೇಳಿದ.

"ಅವರು ಎಷ್ಟು ಹೊತ್ತಿಗೆ ಬಂದಿದ್ದರು?"

"ಯಾಕೆ? ಅವರು ಬಹಳ ಒಳ್ಳೆಯವರು. ನಮ್ಮ ತಾತನಿಗೆ ಬಹಳ ಬೇಕಾದವರು".

"ಹಾಗಲ್ಲ. ಆನಂದೇವಿ. ನಾನು ಯಾರನ್ನೂ ಸಂದೇಹಿಸುತ್ತಾ ಇಲ್ಲ. ಆದರೆ ಇಂತಹ ಸಂದರ್ಭಗಳಲ್ಲಿ ಪ್ರತಿಯೊಂದು ವಿವರವೂ ಬೇಕಾಗುತ್ತದೆ. ಪತ್ತೇದಾರರಾದ ನಾವು ಪ್ರತಿ ಅಂಶವನ್ನೂ ಗಮನಿಸುತ್ತೇವೆ".

"ನಿನ್ನೆಯ ದಿನ ರಾತ್ರಿ ಸುಮಾರು ಎಂಟುವರೆ ಗಂಟೆ, ಒಂಬತ್ತು ಗಂಟೆಯ ಹೊತ್ತಿನಲ್ಲಿ ಬಂದಿದ್ದರು. ಪಿಳ್ಳೆಯವರು ಯಾವಾಗಲೂ ಬರುವುದು ರಾತ್ರಿ ಎಂಟರ ಮೇಲೆಯೇ. ದಿನವೂ ಬಂದು ಆಫೀಸಿನ ವಿಷಯವೆಲ್ಲವನ್ನೂ ತಾತನಿಗೆ ಹೇಳಿ ಹೋಗುತ್ತಾರೆ. ಒಂದೊಂದು ದಿನ ಬೇಗ ಬರುತ್ತಾರೆ.

ಕೆಲವು ದಿನ ಹೊತ್ತಾಗಿ ಬರುತ್ತಾರೆ. ನಿನ್ನೆ ಬರುವ ವೇಳೆಗೆ ನಾನು ಹೇಳಿದಂತೆ ಒಂಭತ್ತು ಗಂಟೆಯ ಸಮಯವಾಗಿತು. ನಿನ್ನೆಯ ದಿನ ಹೇಳಿಕೊಳ್ಳುವಂತಹ ವಿಶೇಷ ಘಟನೆಯೊಂದು ನಡೆಯಿತು. ನಿನ್ನೆ ಸಾಯಂಕಾಲ ಮನೆಗೆ ಬರುವಾಗ ತಾತ ಮೋಟಾರಿಗೆ ಸಿಕ್ಕಿಬಿಡುವುದರಲ್ಲಿದ್ದರು. ಈ ಆನಂದರು ಎತ್ತಲಿಂದಲೋ ಬರುತ್ತಿದ್ದವರು ಹಠಾತ್ತನೆ ತಾತನನ್ನು ಪಕ್ಕಕ್ಕೆ ಎಳೆದು ಉಳಿಸಿದರು. ''ಅಪರಿಚಿತನಾದ ತರುಣ ಬಂದು ನನ್ನ ಪ್ರಾಣವನ್ನುಳಿಸಿದ. ಅವನು ಯಾವ ಜನ್ಮದ ತಂದೆಯೋ" ಎಂದು ನಿನ್ನೆಯೆಲ್ಲಾ ಇವರನ್ನು ಹೊಗಳಿದ್ದೂ ಹೊಗಳಿದ್ದೆ''.

''ಓಹೋ? ಈ ಆನಂದ ನಿಮಗೆ ಹೊಸ ಪರಿಚಯವೋ?"

"ಹೌದು. ನಿನ್ನೆಸುಮಾರು ಏಳು ಗಂಟೆಯ ಸಮಯದಲ್ಲಿಯೇ ಇವರನ್ನು ನೋಡಿದುದು '.

''ಆನಂದರು ಇಲ್ಲಿಂದ ಎಷ್ಟು ಹೊತ್ತಿಗೆ ಹೊರಟರು".

',ಏನು ಮಿ॥ ಸಂಪತ್! ನಿಮ್ಮ ಕ್ರೂರ ದೃಷ್ಟಿಯು ನನ್ನ ಮೇಲಿಯೂ ಬಿದ್ದ ಹಾಗಿದೆ?"

ನಡುವೆ ಬಾಯಿ ಹಾಕಿ ಸುಂದರ್ ಹೇಳಿದ.

''ನಿಮ್ಮ ಮೇಲೆಯೇ ಏನು, ಕೆಲವು ಬಾರಿ ನನ್ನ ಮೇಲೆಯೂ ಬೀಳುತ್ತದೆ''.

ಅವರ ಮಾತನ್ನು ನಿಲ್ಲಿಸಿ ಸಂಪತ್ ಪುನ; ಪ್ರಶ್ನೆ ಮಾಡಿದ.

''ಹತ್ತು ಹದಿನೈದು ನಿಮಿಷಗಳಲ್ಲಿ ಅವರು ಹೊರಟುಹೋದರು".

"ಸರಿ,—ಪಿಳ್ಳೆಯವರು ಎಷ್ಟು ಹೊತ್ತಿಗೆ ಹೋದರು?"

"ಅವರು ಅರ್ಧ ಮುಕ್ಕಾಲು ಗಂಟೆ ಇದ್ದರು".

''ಪಿಳ್ಳೆಯವರು ಬಂದಾಗ ನಿಮ್ಮ ತಾತ ಎಲ್ಲಿದ್ದರು''.

''ಅವರು ಕೋಣೆಯಲ್ಲಿದ್ದರು''.

"ಅವರು ಅಲ್ಲಿಗೇ ಹೋದರೊ"

ಅಲ್ಲಿಗೇ ಹೋದರು. ಪಿಳ್ಳೆಯವರಿಗೆ ನಮ್ಮ ಮನೆಯಲ್ಲಿ ಎಲ್ಲಿ ಹೋಗುವುದಕ್ಕೂ ಅಡ್ಡಿಯಿಲ್ಲ"

"ಆಗ ನೀವೇನು ಮಾಡುತ್ತಿದ್ದಿರಿ ?"

"ಆ ! ಪಿಳ್ಳೆಯವರು ಬರುವುದಕ್ಕೆ ಮೊದಲೇ ತಾತ ಹಾಲು ತಂದು ಕೊಡು ಕುಡಿದು ಮಲಗಿಕೊಳ್ಳುತ್ತೇನೆ ಎಂದರು. ನನಗೂ ಊಟವಾಗಿತ್ತು. ನಾನೂ ತಾತನೊಂದಿಗೇ ಹಾಲು ಕುಡಿಯೋಣವೆಂದು ಸಣ್ಣ ಬೆಳ್ಳಿ ಚೊಂಬಿನಲ್ಲಿ ಹಾಲನ್ನೂ, ಎರಡು ಲೋಟಾಗಳನ್ನೂ ತೆಗೆದುಕೊಂಡು ಹಜಾರಕ್ಕೆ ಬರುವ ವೇಳೆಗೆ ಪಿಳ್ಳೆ ಬಂದರು. ರೂಮಿನಲ್ಲಿದ್ದಾರೆ ಹೋಗಿ – ಎಂದು ಹೇಳಿ, ಪಿಳ್ಳೆಯವರಿಗಾಗಿ ಮತ್ತೊಂದು ಲೋಟ, ಮಗದೊಂದಿಷ್ಟು ಹಾಲು ತೆಗೆದುಕೊಂಡು ಕೋಣೆಗೆ ಹೋದೆ"

"ಆಗ ಅವರಿಬ್ಬರೂ ಏನು ಮಾಡುತ್ತಿದ್ದರು ?"

"ಏನು ಮಾಡುತ್ತಾರೆ ? ಮಾತನಾಡುತ್ತಿದ್ದರು. ಈ ಆನಂದರು ಮಾಡಿದ ಉಪಕಾರವನ್ನು ವಿವರಿಸುತ್ತಿದ್ದರು"

"ಅವರು ಮಾತನಾಡಿ ಮುಗಿಸುವವರೆವಿಗೆ ನೀವಿದ್ದಿರೋ ?"

"ಇಲ್ಲ. ನಾನು ಹೋಗಿ ಮೂರು ಲೋಟಾಗಳಿಗೂ ಹಾಲು ಹಾಕಿ ಅವರಿಗೂ, ತಾತನಿಗೂ ಒಂದೊಂದು ಲೋಟಾ ಕೊಟ್ಟು ನಾನೂ ಕುಡಿಯ ತೊಡಗಿದೆ"

"ಕುಡಿಯುತ್ತಾ ನೀವೂ ಅಲ್ಲೇ ಕುಳಿತುಬಿಟ್ಟಿರೋ ?"

"ಹಾಗಲ್ಲ ಪಿಳ್ಳೆಯವರು ಹಾಲು ಬೇಡವೆಂದರು. ತಾತ ಹಾಲು ಕೊಟ್ಟರೆ ಬೇಡವೆನ್ನಬಾರದು ಎನ್ನುತ್ತಲೂ, ತೆಗೆದುಕೊಂಡರು. ಸಕ್ಕರೆ ಸಾಲದೆಂದರು. ಹೋಗಿ ತೆಗೆದುಕೊಂಡು ಬಂತೆ"

"ತ್ರಡೆಯಿರಿ. ಹಾಲಿಗೆ ಸಕ್ಕರೆ ಸಾಲದಾಗಿತ್ತೋ ?

"ಇಲ್ಲ. ನಮಗೆ ಸಾಕಾಗಿತ್ತು. ಅವರಿಗೆ ಸಾಕಾಗಿರಲಿಲ್ಲವೆಂದು ಕಾಣುತ್ತದೆ. ಅವರು ಮಾತ್ರ ಹಾಕಿಸಿಕೊಂಡರು"

"ಆಮೇಲೆ ?

"ಆಮೇಲೆ ಅವರು ಮಾತನಾಡುತ್ತಿದ್ದರು"

"ಏನು ಮಾತನಾಡುತ್ತಿದ್ದರೋ ?"

"ಸುಮಾರು ನೂರು ಮನೆಗಳನ್ನು ಕಟ್ಟುವುದಕ್ಕೆ ಅರ್ಜಿಗಳು ಬಂದಿವೆ. ಬೇಗ ಕೆಲಸ ಆರಂಭಿಸಬೇಕು —ಎಂದು ಮಾತನಾಡಿಕೊಳ್ಳುತ್ತಿದ್ದರು:

"ಅಷ್ಟೇನೋ ಇನ್ನೇನಾದರೂ ಮಾತನಾಡಿದರೋ ?"

ಆಶಾ ನೆನೆಸಿಕೊಂಡು ಅಂದಳು.

"ಹಾ! ಇನ್ನೊಂದು ವಿಷಯ ಮಾತನಾಡುತ್ತಿದ್ದರು. ಷಾರ್ಟ್ ಹ್ಯಾಂಡ್ ಟೈಪಿಸ್ಟ್ ಒಬ್ಬಳು ಬೇಕೆಂದು ಪೇಪರ್‌ಗಳಲ್ಲಿ ಅಡ್ವರ್‌ಟೈಸ್‌ಮೆಂಟ್ ಕೊಟ್ಟಿದ್ದರು. ಆ ಕೆಲಸಕ್ಕೆ ಯಾರಾದರೂ ಬಂದರೇ ಎಂದು ಕೇಳಿದರು. ಪಿಳ್ಳೆ ಇಲ್ಲವೆಂಬುದಾಗಿ ಹೇಳಿದರು"

"ಇಷ್ಟು ದಿನ ಇಲ್ಲದಿದ್ದ ಟೈಪಿಸ್ಟಿನ ಅಗತ್ಯ ಈಗೇನು ಬಂತು ?"

"ಮೊದಲಿನಿಂದಲೂ ಒಬ್ಬಳು ಇದ್ದಳು. ಈಗ ನಾಲ್ಕು ದಿನಗಳಿಂದ ಹೇಳದೇ ಕೇಳದೇ ಹಾಗೆಯೇ ಹೊರಟುಹೋಗಿದ್ದಾಳೆ. ಈಗ ಮನೆಗಳನ್ನು ಕಟ್ಟುವ ಕೆಲಸ ಷುರು ಆಗುವುದರಿಂದ ಕೆಲಸಕ್ಕೆ ಒಬ್ಬಳು ಬೇಕೇಬೇಕೆಂದು ಪಿಳ್ಳೆಯವರು ಹೇಳಿದ್ದರು ಯಾವಳಾದರೂ ಕೆಲಸಕ್ಕೆ ಬಂದಳೇ–ಎಂದು ತಾತ ವಿಚಾರಿಸಿದರು."

"ಇನ್ನೇನು ಮಾತನಾಡಿದರು ?

"ಇನ್ನೇನೇನು ಮಾತನಾಡಿಕೊಂಡರೋ ? ಸ್ವಲ್ಪ ಹೊತ್ತು ಕುಳಿತಿದ್ದೆ. ಅನಂತರ ನಿದ್ದೆ ಬಂದಿತು. ಹೋಗಿ ಮಲಗಿಬಿಟ್ಟೆ"

"ನೀವಿದ್ದಾಗ ಅವರುಗಳಿಗೆ ಬಿಸಿಬಿಸಿಯಾದ ಮಾತುಕತೆಗಳೇನಾದರೂ ನಡೆದುವೇ ?"

"ಇಲ್ಲ............

"ನೀವು ಹೋಗಿ ಮಲಗಿಕೊಂಡನಂತರ ನಡೆದಿರಬಹುದೇ ?"

"ಖಂಡಿತವಾಗಿ ಇಲ್ಲ. ಪಿಳ್ಳೆಯವರಿಗೆ ತಾತನಲ್ಲಿ ಬಹಳ ಆದರ ವಿಶ್ವಾಸ. ತಾತನನ್ನು ಅವರು ತಮ್ಮ ತಂದೆಯಂತೆ ಭಾವನೆ ಮಾಡುತ್ತಿದ್ದರು"

"ಅಂದರೆ ನಿಮ್ಮ ತಾತ ಜೀವಂತರಾಗಿದ್ದಾಗ ನೋಡಿದ ಕಡೆಯ ವ್ಯಕ್ತಿ ಪಿಳ್ಳೆಯವರು ಅಲ್ಲವೇ ?"

"ಅಲ್ಲ. ನೋಡಿದ ಕಡೆಯ ವ್ಯಕ್ತಿ ಗುಂಡಮ್ಮ. ಗುಂಡಮ್ಮ ಬಾಗಿಲುಗಳೆಲ್ಲವನ್ನೂ ಹಾಕಿಕೊಂಡು ಮಲಗಿಕೊಳ್ಳುವಾಗ ಸೇರಿಸಿದ್ದ ತಾತನ ರೂಂ ಬಾಗಿಲನ್ನು ತೆಗೆದು ಏನಾದರೂ ಬೇಕೇಎಂದು ಕೇಳಿದರಂತೆ. ತಾತ

ಏನೂ ಬಿಡದೆನೆಂದು ಹೇಳಿದರಂತೆ. ಆನಂತರ ಗುಂಡನನ್ನು ಮುಗಿಸಿಕೊಂಡರು''

"ಇದು ಆತ್ಮಹತ್ಯೆಯೇ ಆಗಿರಲಿ, ಕೊಲೆಯೇ ಆಗಿರಲಿ ಇದರ ಕಾರಣ ಮತ್ತು ವಿವರಗಳನ್ನು ಪತ್ತೆಮಾಡಲು ನನ್ನ ಕೈಲಾದುದೆಲ್ಲವನ್ನೂ ಮಾಡುತ್ತೇನೆ"

ಸಂಪತ್ ಸುಂದರರು ಆಶಾದೇವಿಯವರಿಂದ ಬೀಳ್ಕೊಂಡು ಹೊರಟರು. ಆನಂದನೂ ಅವರನ್ನು ಅನುಸರಿಸಿದ.

ದಾರಿಯಲ್ಲಿ ಸಂಪತ್ ಹೇಳಿದ.

''ಸುಂದರ್ ! ಮನೆಗೆ ಹೋದ ಕೂಡಲೇ ಈ ಕೇಸಿನ ತನಿಖೆ ಕ್ರಮ ಯಾರು ನಡೆಸುತ್ತಿದ್ದಾರೆಂದು ತಿಳಿದುಕೊಳ್ಳಬೇಕು. ಅವರೊಂದಿಗೆ ವಿವರವಾಗಿ ಮಾತನಾಡುವವರೆವಿಗೆ ನಾವು ಏನು ನಿರ್ಧರಿಸುವುದೂ ಸಾಧ್ಯವಿಲ್ಲ"

ಸುಂದರ್ ತನ್ನ ಭಾವನೊಂದಿಗೆ ಅಂದ.

"ಆಶಾದೇವಿ ಈ ದಿನ ಬೆಳಗಾಗ ಹೊತ್ತಾಗಿ ಎದ್ದುದು ವಿಚಿತ್ರವಾಗಿದೆ ಇದರಲ್ಲಿ ನನಗೊಂದು ತೋರುತ್ತದೆ. ಸಕ್ಕರೆ ಬೇಕೆಂದು ಆಶಾದೇವಿಯನ್ನು ಒಳಗೆ ಕಳುಹಿಸಿದ ಪಿಳ್ಳೆ ಆಕೆ ಕುಡಿಯುವ ಹಾಲಿಗೆ ಏನಾದರೂ ಹಾಕಿದ್ದರೆ ಆಕೆಗೆ ಮಾಮೂಲು ಹೊತ್ತಿಗೆ ಎಚ್ಚರವಾಗದೇ ಇರಲು ಸಾಧ್ಯವಿದೆ ಅದರಲ್ಲಿಯೂ ಅಲ್ಲಿ ಮಾತನಾಡುತ್ತ ಕುಳಿತಿದ್ದಂತೆಯೇ ಆಕೆ ತನಗೆ ನಿದ್ದೆ ಬಂದಿತೆಂದೂ ಎದ್ದು ಹೊರಟುಹೋದೆನೆಂದೂ ಹೇಳುತ್ತಾಳೆ"

ಸಂಪತ್ ಮಾತನಾಡಲಿಲ್ಲ. ಆನಂದ್ ಆಡಿದ.

"ಪಿಳ್ಳೆ ಅದು ಹೇಗೆ ಹಾಕುತ್ತಾನೆ. ಬಾಬೂರಾಯ ಅಲ್ಲಿಯೇ ಕುಳಿತಿದ್ದನಲ್ಲ"

"ಅದಕ್ಕೇನು ? ಆ ಮುದುಕ ಎಲ್ಲಿ ನೋಡುತ್ತಿದ್ದನೋ ?"

"ಹಾಗಾದರೆ ಈ ಕೊಲೆಗೂ ಪಿಳ್ಳೆಗೂ ಏನಾದರೂ ಸಂಬಂಧವಿದೆಯೆನ್ನುತ್ತೀರಾ ?"

ಕಡೆಗೀಗ ಸಂಪತ್ ಹೇಳಿದ.

"ಹಾಗೆಲ್ಲಾ ಮಾತನಾಡಬಾರದು. ಮಿ|| ಆನಂದ್. ಪತ್ತೆ ತರದೂದಿನಲ್ಲಿ ಎಲ್ಲರನ್ನೂ ಸಂದೇಹಿಸುತ್ತೇವೆ. ನಿಮ್ಮನ್ನೂ ಸಂದೇಹಿಸುತ್ತೇವೆ. ಆಶಾದೇವಿಯನ್ನೂ ಸಂದೇಹಿಸುತ್ತೇವೆ ನಾವು ಆಡುವಂತಹ ಎಷ್ಟೋ ಮಾತು ಮಾತುಗಳಿಗೆ ಅರ್ಥವಿರುವುದಿಲ್ಲ.

೬

"ನಿಮ್ಮ ಕತೆ ಬಹಳ ಸ್ವಾರಸ್ಯವಾಗಿದೆ. ಇಂದ್ರ. ಸಾಯಂಕಾಲ ಮೋಟಾರು ಅಪಘಾತದಿಂದ ಸಾಯಬೇಕಾಗಿದ್ದ ಮುದುಕನನ್ನು ಉಳಿಸಿದಿರಿ. ಆದರೆ ಅದೇ ದಿನ ರಾತ್ರಿ ಯಾರೋ ಅವನನ್ನು ಕೊಂದು ಹಾಕಿದರು ದೈವ ನಿಯಾಮಕದಲ್ಲಿ ಒಬ್ಬ ಸಾಯಬೇಕು ಎಂದಿದ್ದರೆ ಮನುಷ್ಯ ಬದುಕಿಸುವುದ ಕ್ಕಾಗುತ್ತದೆಯೆ?''

"ಹಾಗಲ್ಲ ವಿಮ್ಮ. ಈಗ ನನಗೆ ಎಲ್ಲವೂ ವಿಚಿತ್ರವಾಗಿ ಕಂಡುಬರು ತ್ತಿದೆ. ಯಾವುದು ಬಿಳುಪು ಯಾವುದು ಕಪ್ಪು ಎಂಬುದನ್ನು ತಿಳಿದುಕೊ ಳ್ಳುವ ಶಕ್ತಿಯೇ ನನಗೆ ಲುಪ್ತವಾಗಿ ಹೋಗಿದೆ"

ವಿಮಲ ವಿಸ್ಮಿತಳಾಗಿ ನೋಡಿದಳು.

"ಹೌದು ಪತ್ತೆ. ನಿನ್ನೆ ರಾತ್ರಿ ಗುಂಡುಕಲ್ಲಿನಂತೆ ಇದ್ದ ಮುದುಕ ಈ ದಿನ ಬೆಳಗಾಗ ಇಲ್ಲ ಆತ ಆತ್ಮಹತ್ಯೆ ಮಾಡಿಕೊಂಡ. ಸತ್ತಿದ್ದಾರೆಂದು ಮಧ್ಯಾನ್ಹ ಅಂದು ಕೊಂಡಿದ್ದೆವು. ಸಾಯಂಕಾಲದ ವೇಳೆಗೆ ಅದು ಖೂನೀ ಎಂದು ಕೊಳ್ಳುವ ಗತಿ ಬಂದಿವೆ ನಿನ್ನೆ ದಿನ ಸಾಯಂಕಾಲ ನಾರ್ತ್ ರೋಡಿ ನಲ್ಲಿ ಮುದುಕನ ಮೇಲೆ ಅಪಘಾತ ನಡೆಯುವುದರಲ್ಲಿತ್ತಷ್ಟೆ. ಸ್ಟೀಯರಿಂಗ್ ಮುಂದೆ ಕುಳಿದ್ದವನಿಗೆ ಕಾರು ನಡೆಸುವುದಕ್ಕೆ ಬರುವುದಿಲ್ಲ—ಹೊಸಬ ಎಂದು ಕೊಂಡಿದ್ದೆ''.

ನಗುತ್ತಾ ವಿಮಲ ಕೇಳಿದಳು.

"ಈಗೇನು ಅಂದು ಕೊಳ್ಳುತ್ತೀರೋ ?"

"ಈಗೇನು ಅಂದು ಕೊಳುತ್ತೇನೆಯೋ? ನಿನ್ನೆ ಸಾಯಂಕಾಲ ಕಾರು ಅಪಘಾತದ ನೆವದಿಂದ ಬಾಬೂರಾಯನನ್ನು ಕೊಲ್ಲಲು ಪ್ರಯತ್ನ ಮಾಡಿ ದನು. ಅದು ಸಫಲವಾಗವೇ ಹೋದುದರಿಂದ ರಾತ್ರಿ ವಿಷ ಪ್ರಯೋಗ ದಿಂದ ಅವನ ಪ್ರಾಣ ತೆಗೆದರು ಎಂದು ತೋರುತ್ತವೆ".

"ನೀವು ಕೇವಲ ಲಾಯರೇನೋ ಎಂದು ಕೊಂಡಿದ್ದೆ. ನೀವು ಸ್ವಲ್ಪ ಸ್ವಲ್ಪ ಪತ್ತೇದಾರರೂ ಆಗುತ್ತಿರುವಂತಿದೆ"

"ತಮಾಷೆ ಮಾಡಬೇಡ. ಆ ಮುದುಕನ ಮೊಮ್ಮಗಳೊಬ್ಬಳಿದ್ದಾಳೆ. ಅದೇ ಆಶಾದೇವಿ ಅಂತ. ಅವಳ ವಿಷಯ ನಿನಗೆ ಹೇಳಿದ್ದೇನಲ್ಲ".

"ಅವಳ ವಿಷಯ ನನಗೇನು ಹೇಳಿದ್ದೀರಿ. ನಿನ್ನೆ ಸಾಯಂಕಾಲದಿಂದ ಅವಳನ್ನು ನಾಲ್ಕು ಬಾರಿ ನೋಡಿದ್ದೆನೆಂದು ಹೇಳಿದಿರಿ"

ಹೌದು. ಆನಂದ ಹಿಂದಿನ ದಿನದಿಂದ ನಾಲ್ಕು ಬಾರಿ ಆಶೆಯನ್ನು ನೋಡಿದ್ದ. ಮುದುಕನೊಡನೆ ಮೊದಲನೆಯ ಬಾರಿ ಹಿಂದಿನ ದಿನ ಸಾಯಂ ಕಾಲ ಹೋಗಿದ್ದ. ಈ ದಿನ ಮಧ್ಯಾಹ್ನ ಒಂದು ಬಾರಿ, ಪತ್ತೇದಾರ ಸಂಪತ್‌ನೊಡನೆ ಮತ್ತೊಮ್ಮೆ. ಅವನನ್ನು ನೋಡಿದನಂತರ ಮಗದೊಮ್ಮೆ.

"ಅವಳ ವಿಷಯವನ್ನೇ ನಾನೀಗ ಹೇಳ ಪುದು".

"ಏನು ಅಂತಹ ಸ್ವಾರಸ್ಯವಾದುದು".

"ನಿನ್ನೆ ರಾತ್ರಿ ಬೇಗ ಮಲಗಿಕೊಂಡ ಆಶಾದೇವಿ ಈ ದಿನ ಬೆಳಗಾಗಿ ಬಹಳ ಹೊತ್ತಾಗಿ ಎದ್ದಳು"

ವಿಮಲ ಪಕಪಕನೆ ನಕ್ಕು ಅಂದಳು.

"ಹೇಳಿ. ಹೇಳಿ. ಬಹಳ ಮುಖ್ಯವಾದ ವಿಷಯ. ಹೆಂಗಸರು ಎಷ್ಟು ಹೊತ್ತಿಗೆ ಮಲಗಿಕೊಳ್ಳುತ್ತಾರೆ. ಎಷ್ಟು ಹೊತ್ತಿಗೆ ಏಳುತ್ತಾರೆ ಎಂಬುದ ಕ್ಕಿಂತಲೂ ಮುಖ್ಯವಾದ ವಿಷಯ ಗಂಡಸರಿಗೆ ಇನ್ನಾವುದಿರುತ್ತದೆ"

"ಮುಖ್ಯವಾದ ವಿಷಯ ಮಾತನಾಡುವಾಗ ನಡುವೆ ತಮಾಷೆ ಮಾಡುತ್ತೀಯೆ, ವಿಮ್ಮು".

"ತಮಾಷೆಯೇನು ಬಂದಿತು? ಇನ್ನೂ ನಿನ್ನೆಯ ದಿನ ತಾನೇ ಅವಳನ್ನು ನೋಡಿದಿರಿ. ಈಗಾಗಲೇ ನಾಲ್ಕು ಬಾರಿ ಹೋಗಿ ಬಂದಿರಿ. ಅಂದರೆ ಏನೋ ಇರಬೇಕಲ್ಲವೇ?"

ಪಕ್ಕದಲ್ಲಿ ಸೋಫಾದ ಮೇಲೆ ಕುಳಿತಿದ್ದವಳನ್ನು ತೋಳುಗಳಲ್ಲಿ ತೆಗೆದು ಆಲಂಗಿಸಿ ಚುಂಬಿಸಿ ಆನಂದ ಹೇಳಿದ.

"ವಿಮ್ಮು ಹಾಗೇನೂ ಇಲ್ಲ. ನೀನಿರುವಾಗ ಈ ಪ್ರಪಂಚದಲ್ಲಿ ನನಗೆ ಇನ್ನಾರೂ ಬೇಡ. ನಿನ್ನೆ ಸಾಯಂಕಾಲ ಕಾರಿಗೆ ಸಿಕ್ಕುವುದರಲ್ಲಿದ್ದವ ನನ್ನು ತಪ್ಪಿಸಿ ಮನೆಗೆ ಕರೆದುಕೊಂಡು ಹೋಗಿಬಿಟ್ಟೆ. ಬೆಳಗಾಗ ಆಕಸ್ಮಾತ್ ವೈಯ್ಯಾಳೀ ಕಾವಲ್ ಕಡೆಗೆ ಹೋಗಿದ್ದೆ. ಮುದುಕ ಮೃತನಾದನೆಂದು

ತಿಳಿಯುತ್ತಲೂ ವಿಸ್ಮಿತನಾಗಿ ಅಲ್ಲಿಗೆ ಹೋದೆ. ಮೊದಲು ಆತ್ಮಹತ್ಯೆ ಎಂದು ಕೊಂಡಿದ್ದೆವು. ಸಾಯಂಕಾಲದ ವೇಳೆಗೆ ಅದು ಖೂನೀ ಎಂದು ಸಂದೇಹ ಬಂದಿತು. ಅಂತಹದ್ದರಲ್ಲಿ ಯಾರಿಗೆ ತಾನೇ ಆಸಕ್ತಿಯುಂಟಾಗುವುದಿಲ್ಲ".

ಅವನು ಚುಂಬಿಸಿದುದೂ, ಅನಂತರ ತಾನು ಅಲ್ಲಿಗೆ ಹೋದುದು ಆಶೆಗಾಗಿ ಅಲ್ಲವೆಂದು ಹೇಳಿದುದೂ ವಿಮಲೆಗೆ ತೃಪ್ತಿಯಾಯಿತು.

"ಸರಿ ಅವಳು ಮಲಗುವ ವಿಷಯವನ್ನೇನೋ ಹೇಳಿದಿರಲ್ಲ. ಅದೇನು? ಅದಕ್ಕೂ ಈ ಕೊಲೆಗೂ ಇರುವ ಸಂಬಂಧವಾದರೂ ಏನು ?"

"ಇದೇಯೋ ಇಲ್ಲವೊ ಖಚಿತವಾಗಿ ಹೇಳುವುದಕ್ಕೆ ಆಗುವುದಿಲ್ಲ. ಆದರೆ ವೈಯ್ಯಾಳೀ ಕಾವಲ್ ಕಂಪನಿಯ ಕಾರ್ಯದರ್ಶಿ ಪಿಳ್ಳೆ ನಿನ್ನೆಯ ದಿನ ರಾತ್ರಿ ಧರ್ಮರತ್ನಾಕರರನ್ನು ನೋಡುವುದಕ್ಕೆ ಹೋಗಿದ್ದನಂತೆ. ಹಾಲು ಕೊಟ್ಟಾಗ ಸಕ್ಕರೆ ಬೇಕು ಅಂದ. ಆಶಾ ಸಕ್ಕರೆ ತರಲು ಹೋದಾಗ ಮುದು ಕನ ಕಣ್ಣಿಗೆ ಬೀಳದಂತೆ ಅವಳ ಹಾಲಿಗೆ ಏನೋ ಔಷಧಿ ಹಾಕಿದನಂತೆ. ಇದ ರಿಂದಲೇ ಆಶೆಗೆ ಬೇಗ ನಿದ್ದೆ ಬಂದಿತು. ಬೆಳಗಾಗ ಎಚ್ಚರವಾಗುವುದು ನಿದಾನವಾಯಿತು—ಎಂದು ಸಂದೇಹ ಬಂದಿದೆ".

ಇಷ್ಟು ಹೊತ್ತು ಕೇಳಿದ್ದರಲ್ಲಿ ವಿಮಲೆಗೆ ಏನೂ ಆಗಿರಲಿಲ್ಲ, ಈ ಮಾತು ಕೇಳಿ ವಿಸ್ಮಿತಳಾದಳು.

"ಅಲ್ಲಾ, ಇದನ್ನೆಲ್ಲಾ ನಿಮಗೆ ಯಾರು ಹೇಳಿದರು''.

"ಆಕೆಯೇ ಹೇಳಿದಳು"

"ಸಕ್ಕರೆ ತರಲು ಹೋಗಿದ್ದವಳಿಗೆ ತನ್ನ ಹಾಲಿನಲ್ಲ ಪಿಳ್ಳೆ ಏನೋ ಹಾಕಿದನೆಂಬುದು ಹೇಗೆ ಗೊತ್ತಾಯಿತು ? ಅವಳು ಹೊಸಲಿನ ಹೊರಗಡೆ ಕಳ್ಳತನದಿಂದ ನಿಂತು ನೋಡಿದಳೇನು?"

"ಹಾಗಲ್ಲ. ಪಿಳ್ಳೆ ಸಕ್ಕರೆ ಕೇಳಿದ. ನಾನು ತರಲು ಹೋದೆ.... ಎಂದಿಷ್ಟೇ ಅವಳು ಹೇಳಿದಳು. ಖಾಸಗಿ ಪತ್ತೇದಾರ ಸಂಪತ್ ಈ ಸಂಬಂಧ ವಾಗಿ ತನಿಖೆ ಮಾಡುತ್ತಿದ್ದಾನೆ. ಅವನ ಛಾವಣ್ಯದುನ ಯಾರೋ ಸುಂದರ ನಂತೆ. ಅವನೂ ಸಹ ಬಂದಿದ್ದ. ಬಹಳ ಚುರುಕು. ಸಾಹಸದಂತೆ. ಪಿಳ್ಳೆ ಸಕ್ಕರೆ ಕೇಳಿ ಆಶೆಯನ್ನು ಹೊರಗೆ ಕಳಿಸಿದ್ದೂ, ಅನಂತರ ಅವಳಿಗೆ ಗಾಢ

ವಾದ ನಿದ್ದೆ ಬಂದದ್ದೂ ಇವೆರಡಕ್ಕೂ ಗಂಟು ಹಾಕಿ ಅವನು ಈರೀತಿಯಾಗಿ ಊಹೆ ಮಾಡಿದ್ದಾನೆ''.

ಅದಕ್ಕೆ ವಿಮಲೆಯು ಏನೂ ಹೇಳಲಿಲ್ಲ. ಅವಳ ತರಹ ನೋಡಿದರೆ ಏನೋ ಯೋಚನೆ ಮಾಡುತ್ತಿರುವಂತೆ ಕಂಡುಬಂದಿತು.

ಏನು ಯೋಚನೆ ಮಾಡುತ್ತಿದ್ದೀಯೋ ವಿಮ್ಮು".

"ವಾಸ್ತವವಾಗಿ ಒಂದು ವಿಷಯ ಆಲೋಚನೆ ಮಾಡುತ್ತಿದ್ದೇನೆ. ಹೇಳಿದರೆ ನೀವು ಏನೇನನ್ನುತ್ತೀರೋ ?"

"ಯಾಕೆ ಏನೋ ಅನ್ನಬೇಕು. ಹೇಳು"

"ವೈಯ್ಯಾಳೀ ಕಾವಲ್ ಕಂಪನಿಗೆ ಪಾರ್ಟ್‌ಟೈಮ್ ಟೈಪಿಸ್ಟ್ ಬೇಕೆಂದು ಯಾವುದೋ ಪೇಪರ್‌ನಲ್ಲಿ ಅಡ್ವರ್‌ಟೈಜ್‌ಮೆಂಟ್ ನೋಡಿದ್ದೆ. ನನಗಾ ಕೆಲಸ ಬರುತ್ತದೆ. ಫುಡ್ ಡಿಪಾರ್ಟ್‌ಮೆಂಟಿನಲ್ಲಿ ಅದೇ ಕೆಲಸ ಮಾಡುತ್ತಿದ್ದೆನೆಂದು ಹೇಳಿದ್ದೇನಲ್ಲಾ. ನಾನೇಕೆ ಹೋಗಿ ಪಿಳ್ಳೆಯನ್ನು ನೋಡಿ, ನನಗೆ ಕೆಲಸ ಕೊಡಿ ಎಂದು ಕೇಳಬಾರದು''.

ಆನಂದ್ ನಗುತ್ತಾ ಅಂದ.

"ಒಳ್ಳೇ ಆಲೋಚನೆ ನಿಂದು ನೀನೇಕೆ ಹೋಗಿ ಅಲ್ಲಿ ಇಲ್ಲಿ ಕೆಲಸ ಮಾಡಬೇಕು".

"ಇಲ್ಲ. ಹಾಗೆ ಹೋಗಿ ಎರಡು ದಿನ ಕೆಲಸ ಮಾಡುವುದರಿಂದ ಪ್ರಯೋಜನವಿದೆ".

"ನೀನು ಎಲ್ಲಿ ಹೋಗಿ ಕೆಲಸ ಮಾಡುವುದು ನನಗೆ ಇಷ್ಟವಿಲ್ಲ. ವಿಮ್ಮು"

"ನನಗೂ ಇಷ್ಟವಿಲ್ಲ. ಆದರೆ ನಾನು ಹೋಗಿ ಅಲ್ಲಿ ಎರಡು ದಿನ ಕೆಲಸ ಮಾಡುವುದರಿಂದ ನಿಮಗೆ ಬಹಳ ಪ್ರಯೋಜನವಾಗುತ್ತದೆ. ಪಿಳ್ಳೆ ಎಂತಹವನು ಅಲ್ಲಿಗೆ ಬಂದು ಹೋಗುವಂತಹ ಜನರು ಎಂತಹವರು ಎಂದು ನಿಮಗೆ ಹೇಳಬಹುದು.

ಅದೂ ನಿಜ. ಆದರೆ ತನ್ನ ಮನದನ್ನೆಯು ಹುಲಿಯ ಬಾಯಲ್ಲಿ ಕೈಯಿಡುವುದು ಆನಂದ್‌ಗ ಇಷ್ಟವಿರಲಿಲ್ಲ.

"ನಾನು ಕೇಳಿದ್ದರಲ್ಲಿ ಆ ಪಿಳ್ಳೆ ಬಹಳ ಅಪಾಯಕಾರಿಯಾದ ಮನುಷ್ಯನಂತೆ ಕಂಡು ಬರುತ್ತಾನೆ.''

ತಿಳಿಯುತ್ತಲೂ ವಿಸ್ಮಿತನಾಗಿ ಅಲ್ಲಿಗೆ ಹೋದೆ ಮೊದಲು ಆತ್ಮಹತ್ಯೆ ಎಂದು ಕೊಂಡಿದ್ದೆವು. ಸಾಯಂಕಾಲದ ವೇಳೆಗೆ ಅದು ಖೂನೀ ಎಂದು ಸಂದೇಹ ಬಂದಿತು. ಅಂತಹದ್ದರಲ್ಲಿ ಯಾರಿಗೆ ತಾನೇ ಆಸಕ್ತಿಯುಂಟಾಗುವುದಿಲ್ಲ".

ಅವನು ಚುಂಬಿಸಿದುದೂ, ಅನಂತರ ತಾನು ಅಲ್ಲಿಗೆ ಹೋದುದು ಆಶೆಗಾಗಿ ಅಲ್ಲವೆಂದು ಹೇಳಿದುದೂ ವಿಮಲೆಗೆ ತೃಪ್ತಿಯಾಯಿತು.

"ಸರಿ ಅವಳು ಮಲಗುವ ವಿಷಯವನ್ನೇನೋ ಹೇಳಿದಿರಲ್ಲ. ಅದೇನು? ಅದಕ್ಕೂ ಈ ಕೊಲೆಗೂ ಇರುವ ಸಂಬಂಧವಾದರೂ ಏನು ?"

"ಇದೇಯೋ ಇಲ್ಲವೊ ಖಚಿತವಾಗಿ ಹೇಳುವುದಕ್ಕೆ ಆಗುವುದಿಲ್ಲ. ಆದರೆ ವೈಯ್ಯಾಳೀ ಕಾವಲ್ ಕಂಪನಿಯ ಕಾರ್ಯದರ್ಶಿ ಪಿಳ್ಳೆ ನಿನ್ನೆಯ ದಿನ ರಾತ್ರಿ ಧರ್ಮರತ್ನಾಕರರನ್ನು ನೋಡುವುದಕ್ಕೆ ಹೋಗಿದ್ದನಂತೆ. ಹಾಲು ಕೊಟ್ಟಾಗ ಸಕ್ಕರೆ ಬೇಕು ಅಂದ. ಆಶಾ ಸಕ್ಕರೆ ತರಲು ಹೋದಾಗ ಮುದು ಕನ ಕಣ್ಣಿಗೆ ಬೀಳದಂತೆ ಅವಳ ಹಾಲಿಗೆ ಏನೋ ಔಷಧಿ ಹಾಕಿದನಂತೆ. ಇದ ರಿಂದಲೇ ಆಕೆಗೆ ಬೇಗ ನಿದ್ದೆ ಬಂದಿತು. ಬೆಳಗಾಗ ಎಚ್ಚರವಾಗುವುದು ನಿದಾನವಾಯಿತು-ಎಂದು ಸಂದೇಹ ಬಂದಿದ್ದೆ".

ಇಷ್ಟು ಹೊತ್ತು ಕೇಳಿದ್ದರಲ್ಲಿ ವಿಮಲೆಗೆ ಏನೂ ಆಗಿರಲಿಲ್ಲ, ಈ ಮಾತು ಕೇಳಿ ವಿಸ್ಮಿತಳಾದಳು.

"ಅಲ್ಲಾ, ಇದನ್ನೆಲ್ಲಾ ನಿಮಗೆ ಯಾರು ಹೇಳಿದರು".

"ಆಕೆಯೇ ಹೇಳಿದಳು"

"ಸಕ್ಕರೆ ತರಲು ಹೋಗಿದ್ದವಳಿಗೆ ತನ್ನ ಹಾಲಿನಲ್ಲಿ ಪಿಳ್ಳೆ ಏನೋ ಹಾಕಿದನೆಂಬುದು ಹೇಗೆ ಗೊತ್ತಾಯಿತು ? ಅವಳು ಹೊಸಲಿನ ಹೊರಗಡೆ ಕಳ್ಳತನದಿಂದ ನಿಂತು ನೋಡಿದಳೇನು?"

"ಹಾಗಲ್ಲ. ಪಿಳ್ಳೆ ಸಕ್ಕರೆ ಕೇಳಿದ. ನಾನು ತರಲು ಹೋದೆ.... ಎಂದಿಷ್ಟೇ ಅವಳು ಹೇಳಿದಳು. ಖಾಸಗಿ ಪತ್ತೇದಾರ ಸಂಪತ್ ಈ ಸಂಬಂಧ ವಾಗಿ ತನಿಖೆ ಮಾಡುತ್ತಿದ್ದಾನೆ. ಅವನ ಭಾವನ್ಯಾದುನ ಯಾರೋ ಸುಂದರ ನಂತೆ. ಅವನೂ ಸಹ ಬಂದಿದ್ದ. ಬಹಳ ಚುರುಕು- ಸಾಮರಸದಂತೆ. ಪಿಳ್ಳೆ ಸಕ್ಕರೆ ಕೇಳಿ ಆಕೆಯನ್ನು ಹೊರಗೆ ಕಳಿಸಿದ್ದೂ, ಅನಂತರ ಅವಳಿಗೆ ಗಾಢ

ವಾದ ನಿದ್ದೆ ಬಂದದ್ದೂ ಇವೆರಡಕ್ಕೂ ಗಂಟು ಹಾಕಿ ಅವನು ಈರೀತಿಯಾಗಿ ಊಹೆ ಮಾಡಿದ್ದಾನೆ''

ಅದಕ್ಕೆ ವಿಮಲೆಯು ಏನೂ ಹೇಳಲಿಲ್ಲ ಅವಳ ತರಹ ನೋಡಿದರೆ ಏನೋ ಯೋಚನೆ ಮಾಡುತ್ತಿರುವಂತೆ ಕಂಡುಬಂದಿತು.

ಏನು ಯೋಚನೆ ಮಾಡುತ್ತಿದ್ದೀಯೋ ವಿಮ್ಮು".

"ವಾಸ್ತವವಾಗಿ ಒಂದು ವಿಷಯ ಆಲೋಚನೆ ಮಾಡುತ್ತಿದ್ದೇನೆ. ಹೇಳಿದರೆ ನೀವು ಏನೇನ್ನುತ್ತೀರೋ ?"

"ಯಾಕೆ ಏನೋ ಅನ್ನಬೇಕು. ಹೇಳು"

"ವೈಯ್ಯಾಳೀ ಕಾವಲ್ ಕಂಪನಿಗೆ ಪಾರ್ಟ್‌ಟೈಮ್ ಟೈಪಿಸ್ಟ್ ಬೇಕೆಂದು ಯಾವುದೋ ಪೇಪರ್‌ನಲ್ಲಿ ಅಡ್ವರ್‌ಟೈಜ್‌ಮೆಂಟ್ ನೋಡಿದ್ದೆ. ನನಗಾ ಕೆಲಸ ಬರುತ್ತದೆ. ಫುಡ್ ಡಿಪಾರ್ಟ್‌ಮೆಂಟಿನಲ್ಲಿ ಅದೇ ಕೆಲಸ ಮಾಡುತ್ತಿದ್ದೆನೆಂದು ಹೇಳಿದ್ದೇನಲ್ಲಾ. ನಾನೇಕೆ ಹೋಗಿ ಪಿಳ್ಳೆಯನ್ನು ನೋಡಿ, ನನಗೆ ಕೆಲಸ ಕೊಡಿ ಎಂದು ಕೇಳಬಾರದು''

ಆನಂದ್ ನಗುತ್ತಾ ಅಂದ.

"ಒಳ್ಳೇ ಆಲೋಚನೆ ನಿಂದು ನೀನೇಕೆ ಹೋಗಿ ಅಲ್ಲಿ ಇಲ್ಲಿ ಕೆಲಸ ಮಾಡಬೇಕು".

''ಇಲ್ಲ. ಹಾಗೆ ಹೋಗಿ ಎರಡು ದಿನ ಕೆಲಸ ಮಾಡುವುದರಿಂದ ಪ್ರಯೋಜನವಿದೆ".

"ನೀನು ಎಲ್ಲಿ ಹೋಗಿ ಕೆಲಸ ಮಾಡುವುದು ನನಗೆ ಇಷ್ಟವಿಲ್ಲ. ವಿಮ್ಮು"

''ನನಗೂ ಇಷ್ಟವಿಲ್ಲ. ಆದರೆ ನಾನು ಹೋಗಿ ಅಲ್ಲಿ ಎರಡು ದಿನ ಕೆಲಸ ಮಾಡುವುದರಿಂದ ನಿಮಗೆ ಬಹಳ ಪ್ರಯೋಜನವಾಗುತ್ತದೆ. ಪಿಳ್ಳೆ ಎಂತಹವನು ಅಲ್ಲಿಗೆ ಬಂದು ಹೋಗುವಂತಹ ಜನರು ಎಂತಹವರು ಎಂದು ನಿಮಗೆ ಹೇಳಬಹುದು.

ಅದೂ ನಿಜ. ಆದರೆ ತನ್ನ ಮನಸದನ್ನೆಯು ಹುಲಿಯ ಬಾಯಲ್ಲಿ ಕೈಯಿಡುವುದು ಆನಂದ್‌ಗ ಇಷ್ಟವಿರಲಿಲ್ಲ.

"ನಾನು ಕೇಳಿದ್ದರಲ್ಲಿ ಆ ಪಿಳ್ಳೆ ಬಹಳ ಅಪಾಯಕಾರಿಯಾದ ಮನುಷ್ಯನಂತೆ ಕಂಡು ಬರುತ್ತಾನೆ.''

"ಅಪಾಯಕಾರಿಯಾದರೆ ಆಗಲಿ ಬಿಡಿ. ಅಪಾಯಕಾರಿಯಾದರೆ ನನ್ನನ್ನು ತಿಂದು ಬಿಡುತ್ತಾನೆಯೇ?"

"ನೀನು ಅಲ್ಲಿಗೆ ಹೋಗಿ ಕೆಲಸ ಮಾಡುವುದು ಬಹಳ ಪ್ರಯೋಜನಕರವಾದುದೇ ಅಣ್ಣ. ಆದರೂ ಒಂದೊಂದು ಬಾರಿ ಇದೆಲ್ಲಾ ನಮಗೇಕೆ ಅನ್ನಿಸುತ್ತದೆ"

"ನಮಗೆ ಸಂಬಂಧವಿಲ್ಲ. ಆದರೂ ತಮಾಷೆಯಾಗಿರುತ್ತದೆ. ಎರಡು ದಿನ ನೋಡೋಣ"

ವಿಮಲ ಬಹಳ ಹೇಳಿದ ನಂತರ ಆನಂದ್ ಒಪ್ಪಿಕೊಂಡ. ಕಡೆಯಲ್ಲಿ ಒಂದು ಮಾತು ಹೇಳಿದ.

"ವಿಮಲ. ಹೋಗುವವಳು ಹೋಗಿಯೇ ಹೋಗುತ್ತೀಯೆ. ನಾನು ಬೇಡವೆಂದರೆ ಕೇಳುತ್ತೀಯಾ? ಆದರೂ ಒಂದು ವಿಷಯ ಹೇಳುತ್ತೇನೆ. ಅಲ್ಲಿ ಇಷ್ಟು ದಿನಗಳವರೆವಿಗೆ ಒಬ್ಬ ಸ್ಟೆನೋಟೈಪಿಸ್ಟ್ ಇದ್ದಳು. ಅವಳು ನಾಲ್ಕು ದಿನಗಳ ಹಿಂದೆ ಇದ್ದಕ್ಕಿದ್ದ ಹಾಗೆಯೇ ಮಾಯವಾಗಿ ಹೋದಳೆಂದು ಕೇಳಿದ್ದೇನೆ."

## ೭

ಬೆಳಗಾಗ ಸುಮಾರು ಹತ್ತು ಗಂಟೆಯ ವೇಳೆಯಲ್ಲಿ ವಿಮಲಾ ಗಾಂಧೀನಗರದಲ್ಲಿ ದೊಡ್ಡದಾದೊಂದು [illegible]ಗಲೆಯ ಮಹಡೀ ಮೆಟ್ಟಲುಗಳನ್ನು ಹತ್ತಿ ವಯ್ಯಾಳೀ ಕಾವಲ್ ಕಂಪನಿಗೆ ಪ್ರವೇಶಿಸಿದಳು.

ಕೆಲಸ ಕೇಳುವುದಕ್ಕಾಗಿಯೇ ಅಲ್ಲಿಗೆ ಬಂದನಂತರ ವಿಮಲೆಗೆ ತನಗೆ ಅಲ್ಲಿ ಕೆಲಸ ಸಿಕ್ಕುತ್ತದೆಯೋ ಸಿಕ್ಕುವುದಿಲ್ಲವೇ ಎಂಬ ಯೋಚನೆಯೇ ಇರಲಿಲ್ಲ. ಕೆಲಸ ಕೊಡುವಂತಹ ವ್ಯಕ್ತಿ ಗಂಡಾಗಿದ್ದು, ಕೆಲಸವಿದ್ದರೆ ತನಗೆ ಕೆಲಸ ಸಿಕ್ಕುವುದರಲ್ಲಿ ಅವಳಿಗೆ ಸ್ವಲ್ಪವೂ ಸಂದೇಹವಿರಲಿಲ್ಲ

ವೈಯಾಳೀ ಕಾವಲ್ ಕಂಪನಿಗೆ ಬಂದ ವಿಮಲಾ ಕೆಲಸಕ್ಕಷ್ಟಕ್ಕೇ ಬಂದಿರಲಿಲ್ಲ

ಇನ್ನೂ ಏನು ಏನೋ ಉದ್ದೇಶಗಳನ್ನು ಇಟ್ಟುಕೊಂಡು ಬಂದಿದ್ದಳು.

ಅವಳು ಬಂದಾಗ ಮಿ॥ ಪಿಳ್ಳೈ ಆಫೀಸಿನಲ್ಲಿರಲಿಲ್ಲ. . ಮಾಮೂಲಿನಂತೆ ಜವಾನ ಹೊರಗೆ ನಿಂತಿದ್ದ. ಪಿಳ್ಳೆಯವರು ಯಾರೋ ಸ್ನೇಹಿತರೊಡನೆ ಸ್ವಲ್ಪ ಹೊರಗಡೆ ಹೋಗಿದ್ದಾರೆಂದೂ ಸ್ವಲ್ಪ ಹೊತ್ತಿನಲ್ಲಿಯೇ ಬರುತ್ತಾರೆಂದೂ ಹೇಳಿದ. ಅದೇ ಪ್ರಕಾರ ಕುಳಿತುಕೊಂಡಳು.

ಸುಮಾರು ಎರಡು ಮೂರು ನಿಮಿಷಗಳು ಕಳೆದಿಬಹುದು. ಅನಂತರವೂ ಕುಳಿತಿರಲು ಬೇಜಾರಾಯಿತು. ಎದ್ದು ಕಚೇರಿಯ ಒಳಗಡೆಯೆ ಶತಪಥ ತುಳಿಯ ತೊಡಗಿದಳು. ಅಲ್ಲಿದ್ದ ಮೇಜು ಕುರ್ಚಿಗಳು, ಪಠಗಳು ಮುಂತಾದುವನ್ನೆಲ್ಲಾ ನೋಡಿದಳು. ಸೆಕ್ರೆಟರಿ ಇಲ್ಲದೇ ಖಾಲಿಯಿದ್ದ ಕೋಣೆಯನ್ನು ಗಮನಿಸಿದಳು.

ಸೆಕ್ರೆಟರಿ ಪಿಳ್ಳೈಯ ಕೋಣೆಯ ಹೊರಗಡೆ ಸೊಗಸಾದುದೊಂದು ಮೇಜು ಇತ್ತು. ಅದರ ಮೇಲಿರಬೇಕಾದ ಮುಮ್ಮೂಲೆಯ ಮರದ ತುಂಡು ಕುರ್ಚಿಯ ಹಿಂದಿದ್ದ ಕಿಟಕಿ ಗೂಡಿನಲ್ಲಿತ್ತು. ಅದನ್ನು ತೆಗೆದು ನೋಡಿದಳು. ಅದರಲ್ಲಿ "ರಂಗನಾಯಕಿ–ಪರ್ಸನಲ್ ಅಸಿಸ್ಟೆಂಟ್ ಟು ದಿ ಸೆಕ್ರೆಟರಿ" ಎಂದು ಬರೆದಿತ್ತು.

ಹಾಗಾದರೆ ಗೈರುಹಾಜರಿಯಾಗಿರುವವಳು ಸ್ಟೆನೋಟೈಪಿಸ್ಟ್ ಅಲ್ಲ. ಪಿಳ್ಳೈಯ ಆಪ್ತ ಸಹಾಯಕಳು. ಅದರ ಜೊತೆಗೆ ಸ್ಟೆನೋಟೈಪಿಸ್ಟ್ ಸಹ ಆಗಿದ್ದಳೋ ಏನೋ?

ಅಷ್ಟರಲ್ಲಿ ಪಿಳ್ಳೈಯ ಮೇಜಿನ ಮೇಲಿದ್ದ ಟೆಲಿಫೋನ್ ಗಣ ಗಣನೆ ಶಬ್ದ ಮಾಡಿತು.

ಸಾಧಾರಣವಾಗಿ ಮತ್ತೊಬ್ಬರ ವಿಷಯ ಕೇಳುವುದರಲ್ಲಿ, ತನಗೆ ಸಂಬಂಧವಿರದಿದ್ದರೂ ಮತ್ತೊಬ್ಬರ ಕಾಗದವನ್ನು ಓದುವುದರಲ್ಲಿ ವಿಮಲೆಗೆ ಬಹಳ ಆಸಕ್ತಿ. ಅಂತಹದ್ದರಲ್ಲಿ ಮತ್ತೊಬ್ಬರಿಗೆ ಬಂದಿದ್ದ ಫೋನ್ ಎತ್ತಿ ಕೇಳಬಾರದೇಕೆ?

ನೋಡಿದಳು. ಪಿಳ್ಳೆ ಬರುವಂತೆ ಕಂಡುಬರಲಿಲ್ಲ. ಅಷ್ಟು ಹೊತ್ತೂ ಅಲ್ಲಿಯೇ ನಿಂತಿದ್ದ ಜವಾನ ಎಲ್ಲಿಯೋ ಹೊರಟು ಹೋಗಿದ್ದ. ವಿಮಲ ಟೆಲಿಫೋನ್ ರಿಸೀವರ್ ಕೈಗೆತ್ತಿಕೊಂಡು ಹೇಳಿದಳು.

"ಏ!! ಪಿಳ್ಳೈಯವರ ಪರ್ಸನಲ್ ಅಸಿಸ್ಟೆಂಟ್ ಮಾತನಾಡುತ್ತಿರುವುದು"

"ಹಾ! ಏನಿದು, ರಂಗನಾಯಕಿ. ನೀನಿನ್ನೂ ಇಲ್ಲಿಯೇ ಇದ್ದೀಯಾ? ಎರಡು ದಿನಗಳ ಹಿಂದೆಯೇ ನಿನ್ನನ್ನು ಕಳಿಸಿಬಿಡಬೇಕೆಂದು ಆ ಪಿಳ್ಳೈಗೆ ಹೇಳಿದ್ದೆನಲ್ಲಾ. ನೀನು ಹೈದರಾಬಾದಿಗೆ ಹೊರಟು ಹೋಗಿದ್ದೀಯೆಂದರೆ ಇಲ್ಲಿಯೇ ಕುಳಿತುಕೊಂಡಿದ್ದೀಯಲ್ಲಾ"

"ನೀವು ನನ್ನನ್ನು ಕಳಿಸಬೇಕೆಂದು ಹೇಳಿದ್ದಿರೇನು"

"ಇದೇನು ಮಕ್ಕಳಾಟವೆಂದುಕೊಂಡಿದ್ದಾನೇನು, ಆ ಪಿಳ್ಳೈ? ನಿನ್ನ ಮುಖ ನೋಡಿಕೊಂಡಿರಲು ಅವನಿಗೆ ಆಸೆ ಎಂದು ಕಾಣುತ್ತದೆ. ಅದಕ್ಕೇ ಹೀಗೆ ಮಾಡಿದ್ದಾನೆ. ನೀನು ಆದಷ್ಟು ಬೇಗ ಹೊರಟು ಹೋಗು"

"ತಾವು ಹೇಳಿದಂತೆಯೇ ಆಗಲಿ"

"ಅಷ್ಟಕ್ಕೂ ಕೇಳುವುದನ್ನೇ ಮರೆತು ಬಿಟ್ಟಿದ್ದೆ. ಅವನೆಲ್ಲಿ ಹೋದ?"

"ಈಗ ಯಾರೋ ಬಂದರು ಅವರೊಂದಿಗೆ ಮಾತನಾಡುತ್ತಾ ಹೋದರು"

"ಇಲ್ಲಿ ಪ್ರಾಣ ಹೋಗುತ್ತಿದ್ದರೆ ಸ್ನೇಹಿತರೊಂದಿಗೆ ಹೋದನೋ? ಬರುತ್ತಲೇ ನನಗೆ ಫೋನ್ ಮಾಡುವಂತೆ ಹೇಳು"

ವಿಮಲ ಮಾತನಾಡುವುದರೊಳಗಾಗಿ ಅತ್ತ ಕಡೆಯಿಂದ ಮಾತನಾಡುತ್ತಿದ್ದ ವ್ಯಕ್ತಿ ಫೋನ್ ಡಿಸ್‌ಕನೆಕ್ಟ್ ಮಾಡಿತು.

ಹೊರಗಡೆ ಬಂದು ಏನೂ ತಿಳಿಯದಂತೆ ಅತಿಥಿ ಅಭ್ಯಾಗತರಿಗಾಗಿ ಹಾಕಲಾಗಿದ್ದ ಸೋಫಾ ಮೇಲೆ ಕುಳಿತುಕೊಂಡಳು. ಒಳಗೆ ಬಂದಾಗ ಕಂಡು ಬರುತ್ತಿದ್ದುದಕ್ಕಿಂತಲೂ ಈಗ ವಿಮಲ ಹೆಚ್ಚು ಆಕರ್ಷಣೀಯವಾಗಿ ಕಾಣುತ್ತಿದ್ದಳು. ಯಾವುದಾದರೂ ಚೇಷ್ಟೆ, ಕುತಂತ್ರಗಳನ್ನು ಮಾಡಿದಾಗ ಅವಳು ಪ್ರಫುಲ್ಲಳಾಗಿರುತ್ತಿದ್ದಳು. ಹಾಗೆ ಈಗವಳ ಮುಖದಲ್ಲಿ ಮಂದಹಾಸದ ಮತ್ತೊಂದು ಛಾಯೆಯು ಬಂದಿತ್ತು. ಕಣ್ಣುಗಳಲ್ಲಿ ಕಾಂತಿಯು ಹೆಚ್ಚಿತ್ತು.

ಮಹಡಿಯ ಮೇಲೆ ಬಂದ ಪಿಳ್ಳೈ ದೂರದಿಂದಲೇ ಆಫೀಸಿಗೆ ಯಾರೋ ಬಂದಿರುವುದನ್ನು ನೋಡಿದ. ಬಂದಿರುವವಳು ಹೆಣ್ಣು ಅದರಲ್ಲಿಯೂ

ರೂಪವತಿ. ಅದರಿಂದ ಖುಷಿಯಾಗಿ ಶಿಳ್ಳೆಹೊಡೆಯುತ್ತಕೊಂಡು ಒಳಗೆ ಬಂದ. ಅವಳು ಕುಳಿತಿರುವುದನ್ನು ನೋಡಿಯೂ ನೋಡದಂತೆ ನಡೆದುಕೊಂಡು, ತಟ್ಟನೆ ಅವಳ ಕಡೆಗೆ ನೋಡಿ ಕೇಳಿದ.

"ನೀವು ಯಾರು?"

ವಿಮಲೆ ಎದ್ದುನಿಂತುಕೊಳ್ಳುತ್ತಾ ಅಂದಳು.

"ನಾನು ವಿಮಲಾ ಅಂತ.... .... "

ಕುಳಿತುಕೊಂಡಿದ್ದ ಪಿಳ್ಳೆ ಹೇಳಿದ.

"ಕುಳಿತುಕೊಳ್ಳಿ. ಕುಳಿತುಕೊಳ್ಳಿ. ಏಳಬೇಕಾಗಿಲ್ಲ. ನಿನ್ನ ಹೆಸರು ವಿಮಲಾ ಅಂತ .... ...."

ಎರಡನೆಯ ವಾಕ್ಯವನ್ನೇ ಅವನು ಏಕವಚನದಲ್ಲಿ ಆಡಿದುದನ್ನು ವಿಮಲಾ ಗಮನಿಸಿದಳು. ಆದರೂ ಗಮನಿಸಿದವಳಂತೆ ತೋರಿಸಿಕೊಳ್ಳಲಿಲ್ಲ. ಕುಳಿತುಕೊಂಡು ಹೇಳಿದಳು.

"ನನ್ನ ಹೆಸರು ವಿಮಲಾ ಅಂತ. ನೀವು ಸ್ಟೆನೋಟೈಪಿಸ್ಟ್ ಬೇಕೆಂದು ಪತ್ರಿಕೆಗಳಲ್ಲಿ ಅಡ್ವರ್‌ಟೈಜ್‌ಮೆಂಟ್ ಕೊಟ್ಟಿದ್ದಿರಿ. ಆ ಕೆಲಸ ನನಗೇನಾದರೂ ಸಿಕ್ಕೀತೇನೋ ಎಂದುಕೊಂಡು ಬಂದೆ"

"ಓಹೋ! ಬಹಳ ಸಂತೋಷ. ನಿನ್ನಂತಹ ಯುವತಿಗೆ ಕೆಲಸಕೊಡ ಬೇಕೆಂದರೆ ನಾನು ಯಾವಾಗಲೂ ಸಿದ್ಧ. ಆದರೆ ಈಗ ಸದ್ಯದಲ್ಲಿ ಯಾವುದೂ ಖಚಿತವಿಲ್ಲ"

ಮೃದುವಾಗಿ ಹೇಳಿದ್ದರೂ ಪಿಳ್ಳೆ ಆಡಿದ ಮಾತಿನಲ್ಲಿ ಕೆಲಸವಿಲ್ಲ ಎಂಬ ಅರ್ಥವಿತ್ತು. ಅವನಿಗೊಂದು ಷಾಕ್ ಕೊಡಬೇಕೆಂದು ವಿಮಲೆ ನಿರ್ಧರಿಸಿದಳು.

"ಖಚಿತವಾಗಿಲ್ಲ. ಯಾವ ವಿಷಯ? ನಿಮ್ಮ ಗೈರುಹಾಜರಿಯಾಗಿರುವ ಪರ್ಸನಲ್ ಅಸಿಸ್ಟೆಂಟ್ ರಂಗನಾಯಕಿ ವಾಪ್ಸು ಬಂದುಬಿಡುತ್ತಾಳೆಂದಿದ್ದೀರೇನು? ಅವಳು ಹೈದರಾಬಾದಿಗೆ ಹೊರಟು ಹೋಗಿದ್ದಾಳಲ್ಲವೇ?"

ಪಿಳ್ಳೆಯ ಮುಖ ಸಪ್ಪೆ ಬಿತ್ತು. ಅದನ್ನು ಮುಚ್ಚಿಕೊಳ್ಳಲು ಪ್ರಯತ್ನ ಪಡುತ್ತಾ ಹೇಳಿದ.

"ಇರಬಹುದು. ಆದರೆ ನಿನಗೆ ಅದು ಹೇಗೆ ಗೊತ್ತಾಯಿತು ?"

"ಈ ವಿಷಯ ಚೆನ್ನಾಗಿ ಬಲ್ಲ ನಿಮ್ಮ ಸ್ನೇಹಿತರೊಬ್ಬರು ಹೇಳಿದರು, ಅವರಾರೆಂಬುದನ್ನು ನೀವೆ ಊಹಿಸಬಲ್ಲಿರಿ. ಬೇಕೆಂದರೆ ನಾನೇ ಹೇಳುತ್ತೇನೆ"

ಎರಡನೆಯ ಬೇಸ್ತು ಬದ್ಧಂತಾಯಿತು, ಪಿಳ್ಳೆಗೆ. ಕುಳಿತಿದ್ದವನು ಎದ್ದು ನಿಂತುಕೊಂಡ. ಪತರುಗುಟ್ಟುತ್ತಿದ್ದ ಮನಸ್ಸು ನಿಲ್ಲಲು ಬಿಡಲಿಲ್ಲ. ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ಓಡಿಯಾಡಿದ. ಪುನಃ ಕುಳಿತುಕೊಂಡ. ಸಿಗರೇಟು ತೆಗೆದು ಹಚ್ಚಿದ. ಅವನ ಮನಸ್ಸು ಏನೇನೋ ಯೋಚನೆ ಮಾಡುತ್ತಿತ್ತು. ತನ್ನೆದುರಿಗೆ ಕುಳಿತಿರುವ ಹೆಣ್ಣು, ತನಗೇನೂ ತೋಚದಂತೆ ಮಾಡಿದ ಹೆಣ್ಣು ಎದುರಿಗೆ ಕುಳಿತಿರುವುದು ಸಹ ಮರೆತು ಹೋಯಿತು.

ಆದರೆ ಅವಳಿಗೆ ಸುಮ್ಮನೆ ಕುಳಿತಿರಲಾಗಲಿಲ್ಲ.

"ಈ ಹವ್ಯಾಸದಿಂದ ದೂರವಾಗಿರಬೇಕೆಂದು ಅವಳನ್ನು ನೀವು ಕಳುಹಿಸಿದಿರೆಂದು ಕಾಣುತ್ತದೆ"

"ಹೌದು. ಹೌದು. ನಮ್ಮ ಹವ್ಯಾಸದಿಂದ ದೂರವಿರಲು ಕಳಿಸುವುದು ಅದೊಂದು ಬಗೆ. ಇನ್ನು ಇತರ ಬಗೆಗಳೂ ಇವೆ. ಅವುಗಳೆಲ್ಲವೂ ಪ್ರಿಯವಾಗಿಯೇ ಇರುವುದಿಲ್ಲ, ವಿಮಲ. ನೀನು ಬುದ್ಧಿವಂತಳಾದ ಹುಡುಗಿ. ಚೆನಾಗಿಯೂ ಇದ್ದೀಯೆ. ಎಷ್ಟೋ ಜನ ನಿನ್ನಂತಹವಳನ್ನು ಮದುವೆಮಾಡಿಕೊಳ್ಳಲು ಸಿದ್ಧವಾಗಿರುತ್ತಾರೆ. ನೀನು ಯಾರನ್ನಾದರೂ ಮದುವೆಮಾಡಿಕೊಂಡು ಸುಖವಾಗಿರಬಾರದೇ ?"

"ಮದುವೆ ಮಾಡಿಕೊಳ್ಳುವವನನ್ನು ಗೊತ್ತು ಮಾಡಿಕೊಂಡಿದ್ದೇನೆ. ಆತನಿಗೆ ತಿಳಿಯದೇ ಏನು ನಡೆದರೂ ಸುಮ್ಮನಿರುತ್ತಾನೆ. ಎಲ್ಲರೂ ಅಷ್ಟೇ. ನನಗೆ ಅಪಾಯವಿದೆ ಎಂದೂ, ನನ್ನನ್ನು ಒಬ್ಬರು ಹೆದರಿಸುತ್ತಾರೆಂದೂ ಗೊತ್ತಾದರೆ ಆಗ ಆತ ಸುಮ್ಮನಿರಲಾರ. ನಿಮ್ಮ ವಿಷಯವೊಂದೂ ಗೊತ್ತಿಲ್ಲದಿದ್ದರೂ ನಾನಿಲ್ಲಿ ಬಂದಿರುವುದು ಆತನಿಗೆ ಗೊತ್ತಿದೆ"

"ನಾನು ನಿನ್ನನ್ನು ಹೆದರಿಸುತ್ತಾ ಇಲ್ಲ. ನಮ್ಮ ದೇಶದ ಹೆಂಗಸರು ಕಚೇರಿ ಪಚೇರಿಗಳಲ್ಲಿ ಕೆಲಸಮಾಡುವುದು ಅಷ್ಟು ಸರಿಯಲ್ಲವೆಂಬ ಭಾವನೆಯಿಂದ ಹೇಳಿದೆ. ಹಾಗೂ ನೀನು ಕೆಲಸಮಾಡಲು ಅಪೇಕ್ಷಿಸುವುದಾದರೆ ಆಕ್ಷೇಪಣೆಯೇನೂ ಇಲ್ಲ. ಮಾಡಬಹುದು.

ತಾನೇ ಗೆದ್ದೆನೆಂದು ವಿಮಲೆಗೆ ಬಹಳ ಖುಷಿಯಾಯಿತು.

"ಈಗ ನೀವು ಹೇಳಿದುದು ಸರಿ. ಹೇಳಿ, ನಿಮ್ಮ ಪ್ಲಾನ್ ಏನು ?"

"ಪ್ಲಾನ್ ! ಇಲ್ಲಿ ಯಾವ ಪ್ಲಾನೂ ಇಲ್ಲ. ನೋಡು, ಅಲ್ಲಿರುವ ಮೇಜು ಕುರ್ಚಿ ನಿನ್ನದು. ಗೈರುವಿಲೆಯಾಗಿದ್ದಾಳೆ ಎಂದು ನೀನು ಹೇಳಿದಂತಹ ನನ್ನ ಪರ್ಸನಲ್ ಅಸಿಸ್ಟೆಂಟ್ ಅಲ್ಲಿಯೇ ಕುಳಿತುಕೊಳ್ಳುತ್ತಿದ್ದುದು. ಇನ್ನು ಮೇಲೆ ನೀನೂ ಅಲ್ಲಿಯೇ ಕುಳಿತುಕೋ. ಯಾರಾದರೂ ಬಂದು ಏನಾದರೂ ಕೇಳಿದರೆ ಅವರೇನು ಹೇಳುತ್ತಾರೆಂದು ಕೇಳಿಕೋ. ನೀನು ಗೊತ್ತಿರುವವಳಂತೆ ಮಾತನಾಡಲು ಹೋಗಬೇಡ"

"ಅಂದರೆ ತಿಳಿದಿದ್ದರೂ ತಿಳಿಯದವಳಂತೆ ಇರಬೇಕು — ಎಂದಲ್ಲವೇ ನೀವು ಹೇಳುವುದು"

"ನಿನಗೇನು ತಿಳಿದಿದೆಯೋ, ಏನು ತಿಳಿಯದೋ ಅದೊಂದೂ ನನಗೆ ಮುಖ್ಯವಲ್ಲ. ನಾನು ಹೇಳಿದಂತೆ ಕೇಳಿಕೊಂಡಿದ್ದರೆ ನಿನಗೆ ಸ್ವಲ್ಪ ಕಾಸೂ ಸಿಕ್ಕುತ್ತದೆ"

ಆ ಮಾತು ಕೇಳಿ ಹೇಳಿ ಜೇಬಿನಿಂದ ಐದು ರೂಪಾಯಿಗಳ ಇಪ್ಪತ್ತು ನೋಟುಗಳನ್ನು ತೆಗೆದು ಅವಳು ಕುಳಿತಿದ್ದ ಸೋಫಾದ ಮೇಲೆ ಹಾಕಿ ಪಿಳ್ಳೈ ತನ್ನ ಕೋಣೆಗೆ ಹೊರಟು ಹೋದ.

"ಈ ಪಿಳ್ಳೈ ಬುದ್ಧಿವಂತನಾಗಿ ಕಾಣುತ್ತಾನೆ. ಪರವಾಯಿಲ್ಲ" ಎಂದುಕೊಂಡು ವಿಮಲೆಯು ಪಕ್ಕದಲ್ಲಿ ಬಿದ್ದಿದ್ದ ನೋಟುಗಳನ್ನು ತೆಗೆದು ವ್ಯಾನಿಟೀ ಬ್ಯಾಗ್‌ನಲ್ಲಿ ಇಟ್ಟುಕೊಂಡಳು.

## ೮

"ನೀವು ಹೇಳುವುದು ಒಂದು ವಿಧವಾಗಿ ಸರಿ. ಸಂಪತ್. ನನಗೂ ಅದೇ ರೀತಿಯಾಗಿ ತೋರಿತು. ಆದರಿಂದಲೇ ನಾವು-ಪೈಯ್ಯಾಳೀ ಕಾವಲ್ ಕಂಪನಿಯ ವ್ಯವಹಾರವನ್ನು ಸೂಕ್ಷ್ಮವಾಗಿ ಪರಿಶೀಲಿಸ ತೊಡಗಿದೆವು. ಎರಡು ದಿನಗಳಿಂದ ಅದೇ ಕೆಲಸವಾಗಿದೆ. ಆದರೆ ನಮಗೆ ಅಲ್ಲಿ ಯಾವ ದೋಷವೂ ಕಂಡು ಬರಲಿಲ್ಲ"

"ನೀವು ಪರಿಶೀಲಿಸಿದುವರಲ್ಲಿ ಏನಾದರೂ ಹೊಸ ವಿಷಯ ಕಂಡು ಬಂದುವೋ ?"

"ಬೇಕಾದಷ್ಟು"

ಮುಂದೆ ಮಾತನಾಡುವುದರೊಳಗಾಗಿ ಇನ್ಸ್‌ಪೆಕ್ಟರ್ ಇಬ್ರಾಹಿಂ ಸಾಹೇಬರು ತಲೆಯ ಮೇಲಿದ್ದ ಪೇಟಾ ತೆಗೆದು ಮೇಜದ ಮೇಲಿಟ್ಟು, ಬೋಳು ತಲೆಯನ್ನು ಕರ್‌ಚೀಫ್‌ನಿಂದ ಒರಸಿಕೊಂಡು, ಬಣ್ಣದಿಂದ ಕಪ್ಪಗಾಗಿದ್ದ ನೆರಿತ ಗಡ್ಡವನ್ನು ಕೈಯಲ್ಲಿ ಸವರಿಕೊಂಡು ಸಿಗರೇಟು ತೆಗೆದು ಹಚ್ಚಿ, ಮುಂದೆ ಮಾತನಾಡ ತೊಡಗಿದನು.

ಸೆಂಟ್ರಲ್ ಪೋಲೀಸ್ ಸ್ಟೇಷನ್ನಿನ ಇನ್ಸ್‌ಪೆಕ್ಟರುಗಳಲ್ಲಿ ಒಬ್ಬರಾದ ಇಬ್ರಾಹಿಂ ಸಾಹೇಬರು ಸುಪ್ರಸಿದ್ಧ ವೆಂಕಟೇಶಮೂರ್ತಿಯವರ ಕೈಕೆಳಗೆ ಬಹಳ ದಿನಗಳು ಕೆಲಸ ಮಾಡಿದವರು. ಧರ್ಮ ರತ್ನಾಕರ ಬಾಬೂರಾಯರ ಮರಣವು ಆತ್ಮಹತ್ಯೆಯೋ, ಕೊಲೆಯೋ ಗೊತ್ತಾಗದೇ ಸಮಸ್ಯೆಗಿಟ್ಟುಕೊಂಡಿದ್ದುದರಿಂದ ಅದರ ತನಿಖೆ ಕ್ರಮವನ್ನು ಸಾಹೇಬರಿಗೆ ಒಪ್ಪಿಸಲಾಗಿತ್ತು. ಸಾಹೇಬರು ಸಂಪತ್‌ಗೆ ಪರಮಾಪ್ತರು.

"ಬೇಕಾದಷ್ಟು. ವಿಷಯವೇನೆಂಬುದನ್ನು ಮೊದಲಿನಿಂದ ಹೇಳುತ್ತೇನೆ, ಕೇಳಿ. ಸ್ಯಾಂಕೀ ಕೆರೆಯ ಆಚೆ ಇರುವ ವೈಯ್ಯಾಳೀ ಕಾವಲ್‌ನಲ್ಲಿ ಧರ್ಮ ರತ್ನಾಕರ ಬಾಬೂರಾಯರಿಗೆ ಒಂದು ಚದುರ ಮೈಲಿಯಷ್ಟು ಭೂಮಿ ಇದೆ. ಅದನ್ನು ಸೈಟುಗಳಾಗಿ ಮಾಡಿ ಮಾರಲು ಅವಕಾಶ ಕೊಡಬೇಕೆಂದು ಅವರು ಟ್ರಸ್ಟ್ ಬೋರ್ಡಿನವರನ್ನು ಕೇಳುತ್ತಿದ್ದಾರೆ. ಇದು ಎರಡು ಮೂರು ವರ್ಷಗಳಿಂದಲೂ ನಡೆಯುತ್ತಿರುವ ವ್ಯವಹಾರ.

"ಇದರ ನಡುವೆ ಸುಮಾರು ನಾಲ್ಕೈದು ತಿಂಗಳುಗಳ ಹಿಂದೆ ಬಾಬೂರಾಯರ ಹಳೆಯ ಸ್ನೇಹಿತ ರಾಮಾನುಜಂ ಬಂದು ಸೇರಿದ. ಸೈಟುಗಳಾಗಿ ಮಾಡಲು ಟ್ರಸ್ಟ್ ಬೋರ್ಡಿನವರು ಅಧಿಕಾರ ಕೊಡುವುದಿಲ್ಲವೆಂದೂ ಅದಕ್ಕೆ ಒಂದು ಉಪಾಯ ಮಾಡಬೇಕೆಂದೂ ಸೂಚನೆ ಕೊಟ್ಟ. "ಬೆಂಗಳೂರಿನ ಅನೇಕ ಭಾಗಗಳಲ್ಲಿ ರೆವಿನ್ಯೂ ಭೂಮಿಯಲ್ಲಿಯೇ ಮನೆಗಳು ಕಟ್ಟಲ್ಪಟ್ಟಿವೆ. ಅವಕ್ಕೆ ವಿದ್ಯುಚ್ಛಕ್ತಿಯ ದೀಪಗಳೂ ಸಿಗುತ್ತವೆ. ಅಂಡರ್ ಗ್ರೌಂಡ್ ಡ್ರೈನೇಜ್ ಮತ್ತು ನೀರು ಸಿಕ್ಕುವುದಿಲ್ಲ, ಅಷ್ಟೆ. ಆದರೆ ಅದು ಕೆಲವು ದಿನಗಳು

ಮಾತ್ರ. ಮನೆಗಳನ್ನು ಕಟ್ಟಿಬಿಟ್ಟರೆ ಅನಂತರ ಮುನಿಸಿಪಾಲಟಿಯವರು ಅದನ್ನು ಸೇರಿಸಿಕೊಂಡು ಬಿಡುತ್ತಾರೆ–ಎಂದು ಸೂಚನೆ ಕೊಟ್ಟ. ಒಂದು ವೇಳೆ ಮುನಿಸಿಪಾಲಿಟಿಯವರು ಒಳಗೆ ಸೇರಿಕೊಳ್ಳದಿದ್ದರೂ ಮನೆಗೆ ಗಿರಾಗ ಯಾಗುವುದರಲ್ಲಿ ಸಂದೇಹವಿಲ್ಲವೆಂದು ಒಪ್ಪಿಸಿದ. ಬಾಬೂರಾಯರು ತಕ್ಕ ಮಟ್ಟಿಗೆ ಹಣವಂತರು. ಅವರೂರಿನಲ್ಲಿ ಸ್ಕೂಲು ಕಟ್ಟಡ ಕಟ್ಟಿಕೊಟ್ಟು ಉಪಾಯವಾಗಿ ಬಿರುದು ಹೊಡೆದುಬಿಟ್ಟರು. ಜನ ತಿಳಿದುಕೊಂಡಿರುವಷ್ಟು ಹಣ ಅವರಲ್ಲಿರಲಿಲ್ಲ. ಮನೆಗಳನ್ನು ಕಟ್ಟುವುದಕ್ಕೇನು ಮಾಡಬೇಕೆಂದು ಪ್ರಶ್ನೆ ಬಂತು. ರಾಮಾನುಜಂ ಅದಕ್ಕೂ ಒಂದು ಪ್ಲಾನು ಮಾಡಿದ. ಸೈಟಿನ ಬೆಲೆ ಎರಡು ಸಾವಿರ. ಮನೆ ಬೆಲೆ ಎಂಟು ಸಾವಿರ. ಹತ್ತು ಸಾವಿರದ ಮನೆ ಮೂರು ತಿಂಗಳಲ್ಲಿ ಕೊಡುತ್ತೇವೆ. ಯಾರಿಗೆ ಬೇಕೋ ಅವರು ಮೂರು ಸಾವಿರ ಕೊಡಬೇಕು. ಭಾರತ ಸರ್ಕಾರದಿಂದಲೋ ಅಥವಾ ಯಾರಾದರೂ ಸಾಹುಕಾರರಿಂದಲೋ ಮಿಕ್ಕ ಹಣ ಸಾಲ ತೆಗೆದು ಮನೆ ಕಟ್ಟಬೇಕು – ಎಂದು ಉಪಾಯ ಹೇಳಿದ. ಇದು ಬಾಬೂರಾಯರಿಗೆ ಸರಿಯಾಗಿ ತೋರಿತು. ವೈಯ್ಯಾಳೀ ಕಾವಲ್ ಕಂಪನಿ ಮೊದಲಾಯಿತು.

"ಆದರೆ ಅದೇನೋ ಮನಸ್ತಾಪ ಬಂದು ರಾಮಾನುಜಂ ಬಾಬೂರಾಯರಿಂದ ಬೇರೆಯಾದ. ಅನಂತರ ಗಣೇಶ ಪಿಳ್ಳೆ ಎಂಬುವನು ಕಾರ್ಯದರ್ಶಿಯಾಗಿ ಬಂದ. ಅವನೇ ಮುಂದಿನ ಕೆಲಸಕಾರ್ಯಗಳನ್ನು ಬಹಳಮಟ್ಟಿಗೆ ನೆರವೇರಿಸಿದ. ಇದುವರೆಗೆ ತೊಂಬತ್ತೆಂಟು ಮನೆಗಳಿಗೆ ಅಡ್ವಾನ್ಸ್ ತೆಗೆದುಕೊಂಡಿದ್ದಾರೆ"

"ಸರಿ. ಆ ಹಣ ಏನಾಯಿತು?"

"ಅದಷ್ಟೂ ವೈಯ್ಯಾಳೀ ಕಾವಲ್ ಕಂಪನಿಯ ಲೆಕ್ಕಕ್ಕೆ ಹೋಯಿತು ಚೆಕ್‌ಗೆ ರುಜುಮಾಡಿ ಹಣತೆಗೆದುಕೊಳ್ಳಬಹುದಾಗಿದ್ದುದು ಬಾಬೂರಾಯರು ಮಾತ್ರ. ವಸೂಲಾದದ್ದು ೨ ಲಕ್ಷ ೯೪ ಸಾವಿರ. ಅದರಲ್ಲಿ ಸುಮಾರು ೨೦ ಸಾವಿರ ರೂಪಾಯಿಗಳು ಆಫೀಸ್ ಖರ್ಚು, ಮನೆಗಳಿಗೆ ಪ್ಲಾನ್ ಬರೆಯಲು ಇಂಜನಿಯರುಗಳಿಗೆ ಕೊಟ್ಟದ್ದು, ಮುಂತಾದುವುಗಳಿಗೆ ಖರ್ಚಾಗಿದೆ. ಅದಷ್ಟು ಸರಿಯೇ. ಮೂರು ದಿನಗಳ ಹಿಂದೆ ಬ್ಯಾಂಕಿನಿಂದ ೨ ಲಕ್ಷ ೭೦ ಸಾವಿರ ರೂಪಾಯಿಗಳನ್ನು ತೆಗೆದುಕೊಳ್ಳಲಾಗಿದೆ. ಅದನ್ನು ಬಾಬೂರಾಯರೇ ಹೋಗಿ ತೆಗೆದುಕೊಂಡಿದ್ದಾರೆ"

"ಅವರೇ ಹೋಗಿ ತೆಗೆದುಕೊಂಡರೇ ?"

"ಹೌದು. ಅವರೇ ಹೋಗಿ ತೆಗೆದುಕೊಂಡಿದ್ದಾರೆ. ಬ್ಯಾಂಕ್ ಮ್ಯಾನೇಜರದನ್ನು ಖಚಿತವಾಗಿ ಹೇಳುತ್ತಾರೆ"

''ಅಂದರೆ ಬ್ಯಾಂಕಿಗೆ ಹೋಗಿ ಹಣ ಪಡೆದವನು ಮತ್ತೊಬ್ಬರಂತೆ ವೇಷ ಧರಿಸುವುದರಲ್ಲಿ ಬಹಳ ಬುದ್ಧಿವಂತನೆಂದು ಹೇಳಬೇಕು.',

"ನೀವು ಎಲ್ಲದಕ್ಕೂ ಹೀಗೇ ಮಾಡುತ್ತೀರಿ. ಬುಡವೇ ಇಲ್ಲದೇ ಯಾವುದಾದರೂ ತೀರ್ಮಾನಕ್ಕೆ ಬಂದು, ನಮ್ಮನ್ನು ಒಪ್ಪಿಕೋ ಎನ್ನುತ್ತೀರಿ ಮಿ|| ಸಂಪತ್, ನೋಡಿ. ಬಾಬೂರಾಯ್ರ ರುಜು ಫೋರ್ಜರಿಯೇ ನೋಡಬೇಕೆಂದೇ ಇದನ್ನು ಬ್ಯಾಂಕಿನಿಂದ ಕೇಳಿ ತಂದಿದ್ದೇನೆ. ಇದಕ್ಕೆ ರುಜು ಮಾಡಿರುವವರು ಬಾಬೂರಾಯರೇ. ಕೈ ಬರಹದ ನಿಪುಣರು ಇದನ್ನು ಖಂಡಿತ ಫೋರ್ಜರಿ ಅಲ್ಲವೆಂದು ಹೇಳುತ್ತಾರೆ."

ಸಂಪತ್ ಚೆಕ್ ತೆಗೆದುಕೊಂಡು ನೋಡಿ ಹೇಳಿದ.

''ರು ಜು ವ ೦ ತೂ ಬಾಬೂರಾಯರದೇ ಎಂದು ಇಟ್ಟುಕೊಳ್ಳೋಣ. ಬಾಕಿಯದೆಲ್ಲವನ್ನೂ ಬರೆದವರು ಅವರಲ್ಲ. ಬಾಬೂರಾಯರು ಹಣ ತೆಗೆದುಕೊಂಡಿದ್ದರೆ ಅವರೇ ಯಾಕೆ ಚೆಕ್ ಪೂರಾ ಬರೆಯಬಾರದಾಗಿತ್ತು?"

''ಇನ್ನೊಬ್ಬರಿಂದ ಬರೆಸಿ ರುಜು ಮಾಡುವುದು ತಪ್ಪಲ್ಲ, ತಾನೇ ?"

"ಅಲ್ಲ. ಆದರೆ ಈ ಚೆಕ್‌ನಲ್ಲಿರುವ ಅಕ್ಷರ ಹೆಂಗಸಿನ ಕೈಬರಹದಂತಿದೆ. ಇದನ್ನು ಯಾರು ಬರೆದಿರಬಹುದೆಂದು ಊಹಿಸಿದ್ದೀರಾ ?"

''ಓಹೋ ? ಒಂದು ತರವಾಗಿ ಗುರ್ತಿಸಿದೆವು. ಬಹಳ ಸ್ಫುಟವಾಗಿ ಗುಂಡಗೆ ಬರೆದಿರುವುದರಿಂದ ಇಂತಹವರದೇ ಎಂದು ಹೇಳುವುದು ಕಷ್ಟ ಆದರೂ ಕಂಪೆನಿಯಲ್ಲಿ ಕೆಲಸ ಮಾಡುತ್ತಿದ್ದ ರಂಗನಾಯಕಿಯ ಕೈ ಅಕ್ಷರವೆಂದು ಸಾಬೀತು ಮಾಡಬಹುದು."

"ಅವಳೆಲ್ಲಿ ?"

"ಅವಳೆಲ್ಲಿಯೋ ಯಾರಿಗೆ ಗೊತ್ತು ? ಬಾ ಬೂ ರಾ ಯ ರು ಚೆಕ್ ಕ್ಯಾಷ್ ಮಾಡಿಸಿದ ಹಿಂದಿನ ದಿನದಿಂದಲೇ ಅವಳ್ಯಾರ ಕಣ್ಣಿಗೂ ಬಿದ್ದಿಲ್ಲ. ಅವಳಿದ್ದ ಮನೆಗೂ ಹೋಗಿ ನೋಡಿದೆವು. ಅವಳ ಸಾಮಾನೂ ಇಲ್ಲ. ಅವಳ ಸುಳಿವೂ ಇಲ್ಲ."

ಸಿಗರೇಟು ಸೇದುತ್ತಾ ಮಾತನಾಡದೇ ಕುಳಿತಿದ್ದವನನ್ನು ಉದ್ದೇಶಿಸಿ ಸಾಹೇಬರು ಹೇಳಿದರು.

"ಸಂಪತ್, ನೀವೇನು ಯೋಚಿಸುತ್ತಿದ್ದೀರೆಂದು ನಾನು ಬಲ್ಲೆ. ನಿಮ್ಮ ಯೋಚನೆಗಳೊಂದೂ ಪ್ರಯೋಜನವಿಲ್ಲ. ಚೆಕ್ ಯಾರಾದರೂ ಬರೆದಿರಲಿ. ಅವಕ್ಕೆ ಬಾಬೂರಾಯರೇ ರುಜು ಮಾಡಿರುವುದರಿಂದ ಅವರೇ ಜವಾಬಾರರು."

"ಅವರೇ ಜವಾಬ್ದಾರರು. ಅವರೀಗ ಸತ್ತು ಹೋಗಿದ್ದಾರೆ. ತಾವು ಬ್ಯಾಂಕಿಗೆ ಹೋಗಿದ್ದುಂಟೇ ಇಲ್ಲವೇ ಎಂಬುದನ್ನು ಅವರು ಹೇಳುವಂತಿಲ್ಲ."

"ಹೌದು. ಆದರೆ ಅವರೇ ಬ್ಯಾಂಕಿಗೆ ಹೋದರೆಂಬುದಕ್ಕೆ ಖಚಿತವಾದ ಸಾಕ್ಷ್ಯಗಳಿವೆ. ಅದನ್ನು ಯಾರೂ ಅಲ್ಲಾಡಿಸುವಂತಿಲ್ಲ."

"ಮುದುಕ ಹಣ ತೆಗೆದುಕೊಂಡ. ಅನಂತರ ಆತ್ಮಹತ್ಯೆ ಮಾಡಿಕೊಂಡ. ಅಥವಾ ಖೂನಿಯಾದ. ಪೋಸ್ಟ್‌ಮಾರ್ಟಂ ಪರೀಕ್ಷೆಯಲ್ಲಿ ಏನಾಯಿತು.?"

"ಆಗುವುದೇನು ? ಅದು ಕಂಡಂತೆಯೇ ಇದೆ. ಪೊಟಾಸಿಯಂ ಸೈನೈಡ್ ಸೀಸೆ ಅಲ್ಲಿತ್ತು. ಅದರಿಂದಲೇ ಮೃತರಾದರೆಂಬುದು ಖಚಿತವಾಗಿಯೇ ಇದೆ. ಡಾಕ್ಟರುಗಳು ಅದನ್ನೇ ಬರೆದಿದ್ದಾರೆ."

"ಇದು ಆತ್ಮಹತ್ಯೆಯೋ ಅಥವಾ ಖೂನಿಯೋ ಎಂಬುದು ಹೇಗೆ ?"

"ಆಗಿರಬಹುದು. ಆದರೆ ನಡೆದುದು ಆತ್ಮಹತ್ಯೆಯಾದರೆ ಹೇಗಿರಬೇಕೋ ಸನ್ನಿವೇಶಗಳು ಹಾಗೆಯೇ ಇವೆ. ಯಾರೂ ಅಲ್ಲಿಗೆ ಬಂದ ಸೂಚನೆಗಳೇ ಇಲ್ಲ. ಯಾರೂ ಬಾಗಿಲು ತೆರೆದಿಲ್ಲ. ರಾತ್ರಿ ಯಾವು ಯಾವುದು ಹೇಗೆ ಹೇಗೆ ಇದ್ದಿತೋ ಬೆಳಗಾಗಲೂ ಹಾಗೆಯೇ ಇತ್ತು."

" ಮುದುಕ ಮಲಗಿದ್ದ ಕೋಣೆಗೆ ಮತ್ತೊಂದು ಹಿಂಬಾಗಿಲಿದೆಯಲ್ಲ. ಅದು ತೆಗೆದಿದ್ದಿತೆಂದು ಕೇಳಿದ್ದೇನೆ."

"ಹೌದು. ನಮಗೂ ಆ ಸಂದೇಹ ಬಂದೇ ಬಂದಿತು. ಅದಕ್ಕೆ ಪೌಡರ್ ಹಾಕಿ ನೋಡಿದೆವು. ಹೊಸದಾಗಿ ಅದಕ್ಕೆ ಬಣ್ಣ ಬಳಿದಿದ್ದಾರೆ. ಅದರ ಮೇಲಿರುವುದು ಮುದುಕನ ಕೈ ಬೆರಳು ಗುರುತುಗಳು ಮಾತ್ರ. ಮತ್ತಾರ ಕೈಬೆರಳ ಗುರ್ತುಗಳೂ ಇರಲಿಲ್ಲ. ಅದನೇ ಯಾವುದಾದರೂ ಕಾರಣ

ಗಳಿಂದ ಆ ಬಾಗಿಲು ತೆಗೆದಿದ್ದಿರಬಹುದು. ಅಥವಾ ಹಿಂದೆ ಯಾವ ಹೊತ್ತಾದರೊ ತೆಗೆದಿಟ್ಟು ಹಾಕಲು ಮರೆತಿರಬಹುದು."

"ಮುದುಕನೇ ಬಾಗಿಲು ತೆಗೆದನೆಂಬುದು ಬಹಳ ಚೋದ್ಯವಾಗಿ ಕಂಡು ಬರುತ್ತದೆ"

"ಸಾಹೇಬರು ಗಡ್ಡದ ಸಿಕ್ಕು ಬಿಡಿಸಿಕೊಳ್ಳುತ್ತಾ ನಕ್ಕು ಹೇಳಿದರು.

ಆ ಬುಡ್ಡ ಬಹಳ ಬುಡ್ಡ ಇದ್ದಾ, ಸಂಪತ್ ಸಾಮಿ. ಅವನಿಗೆ ಹೆಂಗಸರ ಚಪಲ ಬಹಳವಾಗಿದ್ದಿತೆಂದು ಕಂಡುಬರುತ್ತದೆ. ಮನೆಯೊಳಗೆ ಯಾರಿಗೂ ಗೊತ್ತಾಗದೇ ಔರತ್ ಲೋಗನ್ನು ಒಳಗೆ ಕರೆದುಕೊಳ್ಳುವುದಕ್ಕಾಗಿಯೇ ಆ ಮುದುಕ ತನ್ನ ಕೋಣೆಗೆ ಹಾಗೆ ಬಾಗಿಲು ಇಟ್ಟುಕೊಂಡಿದ್ದಾನೆ. ಕೊಲೆಯಾದ ದಿನ ರಾತ್ರಿ ಸುಮಾರು ಎರಡೂವರೆ ಗಂಟೆಯಲ್ಲಿ ಬಸವನಗುಡಿಯ ಬೀಟ್ ಪೋಲೀಸಿನವನು ಆ ರಸ್ತೆಯಲ್ಲಿ ಬಂದ. ಆ ಮನೆಯಿಂದ ಒಬ್ಬ ಹೆಂಗಸು ಹೊರಗೆ ಹೋದುದನ್ನು ಅವನು ನೋಡಿದ. ಅವಳು ನೀಲಿಯ ಸೀರೆ ಉಟ್ಟುಕೊಂಡು ಮುಖಕ್ಕೆ ಮಫ್ಲರ್ ಸುತ್ತಿಕೊಂಡಿದ್ದಳಂತೆ. ದೂರದಲ್ಲಿಯೇ ನೋಡಿದ ಪೋಲೀಸಿನವನು ಕೂಗು ಹಾಕಿದ. ಅವಳು ಸಿಕ್ಕಲಿಲ್ಲ. ಇದ್ದಕ್ಕಿದ್ದ ಹಾಗೆಯೇ ಮಾಯವಾದಳು. ನಿನ್ನೆ ಅದು ಅಷ್ಟು ಮುಖ್ಯವಾದ ವಿಷಯವಾಗಿರಲಿಲ್ಲ. ಈ ಪ್ರಸಂಗದಿಂದ ಅದು ಮುಖ್ಯವೆನಿಸಿದೆ. ಅಷ್ಟು ಬೇಗ ಇದ್ದಕ್ಕಿದ್ದಹಾಗೆಯೇ ಮಾಯವಾಗಬೇಕಾಗಿದ್ದರೆ ಹೊರಗೆ ಬರುತ್ತಿದ್ದ ಹಾಗೆ ಕಂಡು ಬಂದ ಹೆಂಗಸು ಪುನಃ ಒಳಗೇ ಹೊರಟುಹೋಗಬಾರದೇಕೆ ? ಹಾಗೆ ಹೋಗಿದ್ದರೆ ಅವಳಿಗೂ ಆ ಮನೆಗೂ ಸಂಬಂಧವಿರಬೇಕಲ್ಲವೇ ?

"ಅಂದರೆ ಹಾಗೆ ಹೊರಗೆ ಬಂದ ಸ್ತ್ರೀ ವ್ಯಕ್ತಿಯೇ ಕೊಲೆ ಮಾಡಿರಬಹುದು. ಆ ವ್ಯಕ್ತಿಯು ಅದೇ ಮನೆಗೆ ಸಂಬಂಧಪಟ್ಟಿರಬಹುದು ಎಂದು ಊಹಿಸುತ್ತೀರಾ ?"

"ನಾನು ಪ್ರತಿಯೊಬ್ಬ ವ್ಯಕ್ತಿಯನ್ನೂ ಸಂದೇಹ ದೃಷ್ಟಿಯಿಂದಲೇ ನೋಡುತ್ತೇನೆ. ಆ ಮುದುಕನ ಮೊಮ್ಮಗಳು ಆಶಾ ದೇವಿಯೇ ಯಾಕೆ ಕೊಲೆ ಮಾಡಿರಬಾರದು—ಎಂದು ಸಹ ಯೋಚಿಸಿದ್ದೇನೆ"

"ಅವಳು ಕೊಲೆ ಮಾಡಿದ್ದರೆ ಉದ್ದೇಶವೇನು ?"

"ಅದನ್ನು ಆಮೇಲೆ ನೋಡೋಣ. ಅವಳು ಕೊಲೆ ಮಾಡಲು ಅವ ಕಾಶವಿದ್ದಿತೇ ಇಲ್ಲವೇ ಎಂಬುವನ್ನು ಮೊದಲು ಗಮನಿಸೋಣ"

'ಹಾಗೆ ಯೋಚನೆ ಮಾಡಿದರೂ ಕೊಲೆ ಮಾಡಿದವಳು ಆಶಾ ದೇವಿಯೂ ಅಲ್ಲ. ಅಥವಾ ಆ ಮನೆಗೆ ಸಂಬಂಧ ಪಟ್ಟವರೂ ಅಲ್ಲ. ಆಶಾ ದೇವಿಯೋ ಅಥವಾ ಆಶಾದೇವಿಯಿಂದ ಆಶ್ರಯ ಪಡೆಯಬಲ್ಲವಳೋ ಆಗಿ ದ್ದರೆ ರಾತ್ರಿ ಅಷ್ಟು ಹೊತ್ತಿನಲ್ಲಿ ಹೊರಗೆ ಹೋಗಬೇಕಾದ ಅವಶ್ಯಕತೆ ಎಲ್ಲಿರು ತ್ತಿತ್ತು ?"

ಇಬ್ರಾಹಿಂ ಸಾಹೇಬರು ಮುಂದೇನೂ ಮಾತನಾಡಲಿಲ್ಲ. ಸಂಪತ್ತೇ ಮಗದೊಂದು ಪ್ರಶ್ನೆ ಕೇಳಿದ.

"ಆ ರಂಗನಾಯಕಿ ಹೇಗಿದ್ದಾಳೆಂದು ವಿಚಾರಿಸಿದಿರಾ ?"

"ಎಲ್ಲಾ ವಿಚಾರಿಸಿದೆ. ಅವಳು ಸಾಧಾರಣವಾಗಿದ್ದಾಳೆ. ಅಷ್ಟು ರೂಪ ವತಿಯೂ ಅಲ್ಲ. ಅಷ್ಟು ಕುರೂಪಿಯೂ ಅಲ್ಲ. ಅವಳ ವರ್ಣನೆ ಕೊಟ್ಟು ಅಂತಹ ಹೆಂಗಸನ್ನು ಹಿಡಿದುಕೊಂಡು ಬನ್ನಿ ಎಂದು ನಮ್ಮ ಪೋಲೀಸಿನವರಿಗೆ ಹೇಳಿ ಕಳುಹಿಸಿದರೆ ಒಂದು ನೂರುಜನ ಹೆಂಗಸರನ್ನು ಹಿಡಿದುಕೊಂಡು ಬಂದು ಬಿಡುತ್ತಾರೆ"

ಸಂಪತ್ ಮತ್ತೇನೂ ಕೇಳಲಿಲ್ಲ. ಇಬ್ರಾಹಿಂ ಸಾಹೇಬರೂ ಬಂದು ಬಹಳ ಹೊತ್ತಾಗಿತ್ತು. ಅವರು ಮೇಲೆದ್ದು ಗಡ್ಡ ನೀವಿಕೊಳ್ಳುತ್ತಾ "ಈ ಕೇಸು ಬಹಳ ಕಷ್ಟವಾಗಿದೆ, ಸ್ವಾಮಿ" ಎಂದು ಹೇಳುತ್ತಾ ಹೊರಟು ಹೋದರು.

ಸಾಹೇಬರೊಂದಿಗೆ ಮಾತನಾಡಿದಾಗಲಂತೂ ಸಂಪತ್ ದಬಾಯಿಸಿ ಬಿಟ್ಟಿದ್ದ. ಯಾರೋ ಒಬ್ಬರು ಬಾಬೂರಾಯನ ವೇಷ ಹಾಕಿಕೊಂಡು ಬ್ಯಾಂಕಿಗೆ ಹೋಗಿ ಹಣ ತೆಗೆದುಕೊಂಡಿರಬಹುದೆಂದು ಹೇಳಿದ್ದ. ಆದರೆ ಆ ವಿಷಯ ಮನಸ್ಸಿನಲ್ಲಿ ಕೊರೆಯುತ್ತಲೇ ಇತ್ತು.

ಬಹಳ ಹೊತ್ತು ಯೋಚನೆ ಮಾಡಿ ನೇರವಾಗಿ ಬ್ಯಾಂಕ್‌ಗೆ ಹೋದ ಮ್ಯಾನೇಜರು ಪಶುಪತಿ ಅಯ್ಯರ್ ಬಹಳ ವಿಶ್ವಾಸದಿಂದ ಸ್ವಾಗತಿಸಿ ಮಾತನಾ ಡಿಸಿದರು.

ಸಂಪತ್ ಹಾಸು ಹೋದ ಕಾರಣವನ್ನು ವಿವರಿಸಿದೊಡನೆಯೇ ಅಂವರು.

''ಈಗಾಗಲೇ ಪೋಲೀಸಿನವರು ಬಂದು ಈ ವಿಷಯವೆಲ್ಲಾ ಕೇಳಿಕೊಂಡು ಹೋಗಿದ್ದಾರೆ'' –

''ಅಲ್ಲಾ. ಹಣ ತೆಗೆದುಕೊಳ್ಳಲು ಬಂದಿದ್ದವರು ಯಾರು ಅಂತ''

''ಅವರೇ ಸ್ವಾಮಿ. ಬಾಬೂರಾಯರು. ಎರಡುಲಕ್ಷ ಎಪ್ಪತ್ತುಸಾವಿರ ರೂಪಾಯಿಗಳನ್ನು ಡ್ರಾ ಮಾಡಲು ಬಂದರೆ ಬಂದವರು ಯಾರೆಂಬುದನ್ನು ನೋಡದೇ ಇರುವುದಕ್ಕೆ ಆಗುತ್ತದೆಯೆ ? ಅವರೇ ಒಳಗೆ ಬಂದು ಕುಳಿತು ಕೊಂಡು ಹಣವನ್ನು ತರಿಸಿಕೊಡಬೇಕೆಂದು ಕೇಳಿದರು. ನಾನು ಯಾಕೆ ಹಣ ತೆಗೆಯುತ್ತೀರಿ ಎಂದು ಎಷ್ಟೋ ಹೇಳಿದೆ. ಕೇಳಲಿಲ್ಲ. ಅವರ ದುಡ್ಡು ಅವರಿಗೆ ಕೊಡದಿರುವುದಕ್ಕೆ ಆಗುತ್ತದೆಯೇ ?''

''ಅವರು ಬರುವಾಗ ಏನು ಡ್ರೆಸ್ ಹಾಕಿಕೊಂಡುಬಂದಿದ್ದೂ ?''

''ಕಲಾಪತ್ತಿನ ಪಂಚೆಯುಟ್ಟು ಹಳೆಯದೊಂದು ಕರಿಯ ಲಾಂಗ್ ಕೋಟು ಹಾಕಿಕೊಂಡು ಬಂದಿದ್ದರು. ಮಾಮೂಲಾಗಿ ನಿಮ್ಮ ಮೈಸೂರಿನವರಂತೆ ತಲೆಗೆ ರುಮಾಲು, ಕೊರಳಿಗೆ ಶಲ್ಯ ಹಾಕಿಕೊಂಡು ಬಂದಿದ್ದರು''

''ಆ ಕೋಟಿನ ಮೇಲೆ ಕರೆಗಿರೆ ಏನಾದರೂ ಇತ್ತೇ ?''

''ಅದೆಲ್ಲಾ ನೋಡುವುದಕ್ಕಾಗುತ್ತದೆಯೇ, ಸ್ವಾಮಿ. ಏನೋ ಕರೀ ಕೋಟು ಹಾಕಿಕೊಂಡು ಬಂದಿದ್ದರೆಂಬುದನ್ನು ಹೇಳಬಲ್ಲೆ. ನಾವು ಅವರನ್ನು ಹೆಚ್ಚಾಗಿ ಯಾಕೆ ನೋಡುತ್ತೇವೆ. ಅವರು ಕೊಟ್ಟಿದ್ದ ಚೆಕ್‌ನ ಮೇಲೆ ರುಜು ಸರಿಯಾಗಿದೆಯೋ ಎಂದು ನೋಡಿದೆ. ಸರಿಯಾಗಿತ್ತು. ಸ್ಪೆಸಿಮನ್ ಸಿಗ್ನೇಚರ್‌ನೊಂದಿಗೆ ಹೋಲಿಸಿ ಸಹ ನೋಡಿದೆ. ಹಣ ತರಿಸಿ ನಾನೇ ಕೊಟ್ಟೆ''

''ಹೇಗೆ ತೆಗೆದುಕೊಂಡು ಹೋದರು ?''

''ಕ್ಯಾಷ್ ತೆಗೆದುಕೊಂಡು ಹೋದರು, ಸ್ವಾಮಿ. ಅಪಾಯ, ಹಾಗೆ ಎತ್ತಿಕೊಂಡು ಹೋಗಬೇಡಿ ಎಂದೆ. ದಿಗಿಲೇನು-ಎಂದರು. ಎಷ್ಟೋ ಜನ ಮುಲ್ತಾನಿಗಳೂ, ವ್ಯಾಪಾರಸ್ಥರೂ ಸಾವಿರಾರು ರೂಪಾಯಿ ತೆಗೆದುಕೊಂಡು ಹೋಗುವುದಿಲ್ಲವೇ ? ಸರಿ ಎಂದುಕೊಂಡು ಸುಮ್ಮನಾದೆ''

''ನಮ್ಮ ಬ್ಯಾಂಕಿನಲ್ಲಿಯೇ ಹಣವಿಟ್ಟಿರಲು ಏನು ಅಡ್ಡಿ ಎಂದು ಕೇಳಿದಿರೋ ?''

"ಆ ಮಾತು ಕೇಳದೇ ಇರುತ್ತೇನೆಯೇ, ಖಂಡಿತವಾಗಿ ಕೇಳಿದೆ. ಯಾವುದೋ ಬ್ಯಾಂಕಿನಲ್ಲಿಟ್ಟರೆ ಅವರಿಗೆ ಮನೆಗಳನ್ನು ಕಟ್ಟಲು ಹತ್ತು ಲಕ್ಷ ಓವರ್‌ಡ್ರಾಫ್ಟ್ ಕೊಡುವುದಾಗಿ ಹೇಳಿದರಂತೆ. ಅವರು ಹಾಗೆ ಹೇಳಿದ ಮೇಲೆ ಬಲಾತ್ಕಾರ ಮಾಡುವುದು ಪ್ರಯೋಜನವಿಲ್ಲವೆಂದು ಸುಮ್ಮನಾದೆ"

"ಅಲ್ಲ. ಬಂದಿದ್ದವರು ಬಾಬೂರಾಯರೇ ಎಂದು ಖಚಿತವಾಗಿ ಹೇಳ ಬಲ್ಲಿರಾ ?"

"ಹೇಗೆ ಕೇಳಿದರೆ ನಾನೇನು ಹೇಳಲಾಗುತ್ತದೆ, ಸ್ವಾಮಿ. ಅಕೌಂಟ್ ಆರಂಭ ಮಾಡಿದಾಗ ಅವರೇ ಬಂದಿದ್ದರು. ಮೂರು ದಿನಗಳ ಹಿಂದೆ ಕ್ಲೋಸ್ ಮಾಡುವಾಗಲೂ ಬಂದಿದ್ದರು. ಅವರದು ಒಂದೇ ವೇಷ. ಒಂದೇ ತರಹ. ನನ್ನ ಬುದ್ಧಿಗೆ ತೋರುವಂತೆ ಎರಡು ಬಾರಿಯೂ ಅವರೇ ಬಂದಿದ್ದುದು. ಮತ್ತೇನು ಹೇಳಲಿ ?"

ಅವರೇ ಪುನಃ ಅಂದರು.

"ಹಣ ತರಲು ಹೇಳಿ ಕಳಿಸಿದೆ. ಅಲ್ಲಿ ನಾನೂ ಅವರೂ ಇಬ್ಬರೇ ಇದ್ದೆವು. 'ಕುಸುಮ ಶರ ಸಮವೆನಿಪ... ....' ಎಂದೇನೋ ಗೊಣಗುಟ್ಟುತ್ತಿದ್ದರು. ಇದೇನು ಎಂದೆ. ವರದಾಚಾರ್ಯರು ಹಾಡುತ್ತಿದ್ದುದು ಎಂದರು. ಅವರು ವರದಾಚಾರ್ಯರ ಪಾರ್ಟುಗಳೆಲ್ಲವನ್ನೂ ಮಾಡುತ್ತಿದ್ದರಂತೆ. ಅವರೇ ಸ್ವಾಮಿ, ಬಂದು ಹಣ ತೆಗೆದುಕೊಂಡು ಹೋದುದು"

ಬಂದಿದ್ದವನು ಬಾಬೂರಾಯನೇ ಎಂದು ಬ್ಯಾಂಕ್ ಮ್ಯಾನೇಜರು ಧೃಢವಾಗಿ ನಂಬಿದ್ದಾನೆ. ಅವನೊಡನೆ ಇನ್ನು ಮಾತನಾಡುವುದು ಪ್ರಯೋಜನವಿಲ್ಲವೆಂದು ಸಂಪತ್ ನಿರ್ಧರಿಸಿದ.

"ಸರಿ, ಸಾರ್. ತಮಗೆ ತೊಂದರೆ ಕೊಟ್ಟೆ. ನಾನಿನ್ನು ಹೋಗಿ ಬರುತ್ತೇನೆ"

ಆತ ನಗುತ್ತಾ ಹೇಳಿದ.

"ತೊಂದರೆ ಏನಿಲ್ಲ. ನಿಮಗೆ ಬೇಕಾದಾಗ ಬನ್ನಿ. ನನಗೆ ತಿಳಿದಿರುವುದನ್ನು ಹೇಳಲು ಯಾವ ಅಡ್ಡಿಯೂ ಇಲ್ಲ"

# ೯

ಒಂದು ಕಡೆ ಸಂಪತ್ ಮತ್ತು ಇಬ್ರಾಹಿಂ ಸಾಹೇಬರು ಅಪರಾಧಿಗಳನ್ನು ಹಿಡಿಯುವುದರಲ್ಲಿ ಆತುರರಾಗಿದ್ದ ಹಾಗೆಯೇ ಮತ್ತೊಂದು ಕಡೆ ರಾಮಾನುಜಂ ಮತ್ತು ಗಣೇಶ ಪಿಳ್ಳೆಗಳೂ ಈ ವ್ಯವಹಾರದಲ್ಲಿ ಬಹಳ ಆಸಕ್ತಿಯಿಂದಲೇ ಇದ್ದರು.

ಸಾಯಂಕಾಲ. ಆಫೀಸು ಮುಚ್ಚುವ ಸಮಯ. ವೈಯ್ಯಾಳೀ ಕಾವಲ್ ಕಂಪನಿಯಲ್ಲಿ ಅವರಿಬ್ಬರೂ ಮಾತನಾಡುತ್ತಾ ಕುಳಿತಿದ್ದರು.

ಗಣೇಶಪಿಳ್ಳೆ ಹೇಳುತ್ತಿದ್ದ.

"ಪೋಲೀಸಿನವರು ಯಾಕೆ ಮೀನ ಮೇಷ ನೋಡುತ್ತಿದ್ದಾರೆಯೋ ನನಗೆ ಅರ್ಥವಾಗುವುದಿಲ್ಲ. ಇದು ಆತ್ಮಹತ್ಯೆ ಎಂದು ತೀರ್ಮಾನವಾದರೂ ಮಾಡಿಬಿಡಬೇಕು. ಅಥವಾ ಈ ಸಂಬಂಧವಾಗಿ ಯಾರನ್ನಾದರೂ ದಸ್ತಗಿರಿ ಮಾಡಿಬಿಡಬೇಕು. ಅಲ್ಲಿಯವರೆವಿಗೆ ನಮಗೆ ತಲೆನೋವು"

ರಾಮಾನುಜಂ ಆತ್ಮವಿಶ್ವಾಸದಿಂದ ಅಂದ.

"ನಮಗೆ ತಲೆನೋವು ಏನು ಬಂದಿತಯ್ಯಾ ? ಅವರು ನಮ್ಮ ತಂಟೆಗೆ ಬರುವುದು ಅಸಂಭವ. ಯಾವ ಸಾಕ್ಷ್ಯದ ಬಲದಿಂದ ನಮ್ಮನ್ನು ಮುಟ್ಟಲಾಗುತ್ತದೆ ?"

"ಹಾಗೇನಿಲ್ಲ. ಸುಮ್ಮನೆ ಬಂದು ಎಳೆದುಕೊಂಡು ಹೋಗಲು ಇದೇನು ಮೊಗಲಾಯ ದರ್ಬಾರೇ ? ಪ್ರತಿಯೊಂದು ವಿಷಯವನ್ನೂ ಸಾಬೀತು ಮಾಡಬೇಕು. ಆದರೂ ಪೋಲೀಸಿನವರು ಯಾವುದಾದರೂ ತೀರ್ಮಾನಕ್ಕೆ ಬರುವವರೆವಿಗೆ ಮನಸ್ಸಿನ ಆತುರವಿರುತ್ತದೆಯಲ್ಲಾ-ಎಂದು ನಾನು ಹೇಳಿದ್ದು. ನಾವು ಯಾವುದಕ್ಕೂ ಹೆದರಬೇಕಾಗಿಲ್ಲ. ನಮ್ಮ ಹೊಸ ಸ್ಟೆನೋಗ್ರಾಫರದೇ ನನಗೆ ಯೋಚನೆ. ನೀನು ಬೇಹುಷಾರಾಗಿ ಅವಳೊಡನೆ ಮಾತನಾಡಿಬಿಟ್ಟೆ"

ರೇಗುತ್ತಾ ರಾಮಾನುಜಂ ಅಂದ.

"ಒಳ್ಳೇ ಮಾತನಾಡುತ್ತೀಯಲ್ಲ, ನಾನು ಟೆಲಿಫೋನ್ ಮಾಡಿದೆ. ಪರ್ಸನಲ್ ಅಸಿಸ್ಟೆಂಟ್ ಎಂದು ಹೇಳಿದಳು. ಸರಿ. ನೀನು ಪ್ಲಾನ್ ಬದಲಾಯಿಸಿದ್ದೀ

ಯೇನೋ ಎಂದುಕೊಂಡೆ. ಅವಳು ರಂಗನಾಯಕಿ ಅಲ್ಲವೆಂದು ನನಗೆ ತೋರಲೇ ಇಲ್ಲ"

"ನಾನೇನು ಅವಳನ್ನಲ್ಲಿ ಕೂರಿಸಿ ಹೋಗಲಿಲ್ಲ. ನಾನು ಬರುವ ವೇಳೆಗೆ ಅವಳೇ ಕುಳಿತುಕೊಂಡಿದ್ದಳು. ನಡೆದು ಹೋದದ್ದನ್ನು ಕುರಿತು ಮಾತನಾಡುವುದು ಸುಖವಿಲ್ಲ. ಮುಖ್ಯವಾದುದೊಂದು ವಿಷಯವಿದೆ. ಸಂಪತ್ ಅಥವಾ ಇಬ್ರಾಹಿಂ ಸಾಬೀ ಆಸಕ್ತನಾಗಿರುವಂತಹ ಒಂದೆರಡು ಸಣ್ಣ ವಿಷಯಗಳು ಅವಳಿಗೆ ಗೊತ್ತು. ಅವರು ಅದರಲ್ಲಿ ಆಸಕ್ತರೆಂಬುದನ್ನು ಇವಳೂ ಬಲ್ಲಳು. ಈ ವಿಷಯ ಆರ್ಮುಗಂನೊಡನೆ ಮಾತನಾಡಿದೆಯಾ ?"

"ಮಾತನಾಡಿದೆ. ಇಲ್ಲಿಗೆ ಬರಲು ಹೇಳಿದ್ದೇನೆ. ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ಬರುತ್ತಾನೆ. ನೀನು ಏನೇ ಹೇಳು, ಅವನು ಶುದ್ಧ ತರಲೆ"

"ಬರೀ ತರಲೆ ಅಷ್ಟೇ ಅಲ್ಲ. ಶುದ್ಧ ತರಲೆ. ಇವನ ತಂಗಿ ಎಷ್ಟು ಒಳ್ಳೆಯವಳೋ ಇವನು ಅಷ್ಟು ಕೆಟ್ಟವನು. ಇವನು ಇಂತಹವನು ಎಂಬ ಸೂಕ್ಷ್ಮ ಸ್ವಲ್ಪವಾದರೂ ತಿಳಿದಿದ್ದರೆ ಏನಾದರೂ ಆಗಲಿ, ಎಂದು ದೂರ ಎದ್ದಿರಬಹುದಾಗಿತ್ತು. ಅವನು ಸುಮ್ಮನೆ ತಲೆಹರಟೆ ಮಾಡುತ್ತಿದ್ದರೆ ನೋಡಿಕೊಂಡು ಸುಮ್ಮನಿರುವುದಕ್ಕೆ ಆಗುತ್ತದೆಯೇ ಏನಾದರೂ ಮಾಡಿ ಅವನಿಗೆ ಒಂದಿಷ್ಟು ಬುದ್ಧಿ ಕಲಿಸಬೇಕಾಗಬಹುದು"

"ಅವನ ಸಂಬಂಧ ಬಿಟ್ಟು ಬಿಟ್ಟರಾಯಿತು. ಅವನಿಗೆ ಬುದ್ಧಿ ಕಲಿಸುವುದು ನಮ್ಮ ಕೆಲಸವೇ ? ಅಷ್ಟಕ್ಕೂ ಅವನು ಮಿತಿಮೀರಿ ಬಂದರೆ ಆ ಕಾಲಕ್ಕೆ ನೋಡಿಕೊಳ್ಳೋಣ. ರಂಗನಾಯಕಿಯಿಂದ ಈಗ ಯಾವ ವಿಷಯವೂ ಹೊರಗೆ ಬರುವಂತಿಲ್ಲ. ಈ ಹೊಸಬಳು ವಿಮಲ ಬಂದು ಸೇರಿಬಿಟ್ಟಿದ್ದಾಳಲ್ಲ"

"ಹದ್ದಿನ ಬಾಯಿಗೆ ಹಾಕುವಂತೆ ಅವಳ ಬಾಯಿಗೂ ಏನಾದರೂ ಹಾಕಬೇಕು ಆದರೆ ಒಂದು ವಿಷಯದಲ್ಲಿ ಹುಷಾರಾಗಿರಬೇಕು. ಅವಳ ಲೌವರ್ ಸಂಪತ್‌ನ ಬಳಿ ಬಹಳವಾಗಿ ಓಡಿಯಾಡುತ್ತಿರುತ್ತಾನಂತೆ"

ರಾಮಾನುಜಂ ಮುಳುಗಿ ಹೋಗುವವನಂತೆ ಕೇಳಿದ.

"ಅಯ್ಯೋ, ದೇವರೇ. ನನಗೆ ಗೊತ್ತೇ ಇರಲಿಲ್ಲವಲ್ಲ. ಅವಳು ನಮ್ಮ ವಿಷಯವೆಲ್ಲವನ್ನೂ ಅವರೊಂದಿಗೆ ಹೋಗಿ ಹೇಳದೇ ಇರುತ್ತಾಳೆಯೆ ?"

"ನನಗೆ ಗೊತ್ತಿರುವಷ್ಟು ಮಟ್ಟಿಗೆ ಅವಳು ಹೇಳುವುದಿಲ್ಲ. ಅವಳಿಗೆ ಎಲ್ಲದಕ್ಕಿಂತಲೂ ದುಡ್ಡಿನ ಮೇಲೆ ಬಹಳ ಆಸೆ. ಇಲ್ಲಿ ದುಡ್ಡು ಸಿಕ್ಕುತ್ತದೆಂಬ ಆಸೆ ಇದೆ. ಅಲ್ಲೇನು ಸಿಕ್ಕುತ್ತದೆ ? ಆ ವಿಷಯದಲ್ಲಿ ನನಗೆ ಹೆದರಿಕೆಯಿಲ್ಲ. ಆದರೆ ಅವಳಿಗೆ ವಿಪರೀತ ದುರಾಸೆ. ಹಣ ಹಣ ಎಂದು ಹೊಡೆದುಕೊಳ್ಳುತ್ತಲೇ ಇರುತ್ತಾಳೆ. ಸಿಲ್ಕ್ ಸೀರೆಗಳನ್ನೇ ಉಡಬೇಕು, ಟ್ಯಾಕ್ಸಿಗಳಲ್ಲಿಯೇ ಓಡಿಯಾಡಬೇಕು, ಕೈತುಂಬಾ ಖರ್ಚು ಮಾಡಿಕೊಂಡಿರಬೇಕು—ಎಂಬ ಚಟವವಳಿಗೆ"

"ಅದು ಸರಿಯಯ್ಯಾ. ಅವಳಿಗೆ ನಾವು ಸಿಲ್ಕ್ ಸೀರೆಗಳನ್ನೂ, ಟ್ಯಾಕ್ಸಿಗಳನ್ನೂ, ಕೈತುಂಬಾ ಹಣವನ್ನೂ ಕೊಡಬೇಕೆಂಬುದು ನಿನ್ನ ಅಭಿಮತವೋ?"

"ಹಾಗೇನಿಲ್ಲ. ಮಾತಿಗೆ ಹೇಳುತ್ತೇನೆ. ಹಾಗವಳು ಖರ್ಚು ಮಾಡತೊಡಗಿದರೆ ಅಷ್ಟೊಂದು ಹಣ ಅವಳಿಗೆಲ್ಲಿ ಬರುತ್ತದೆಂದು ಯಾರದಾದರೂ ಕಣ್ಣು ಬೀಳಬಹುದು ಆ ವಿಷಯ ಸೂಕ್ಷ್ಮವಾಗಿ ಹೇಳಿದರೂ ಅವಳು ಅರ್ಥಮಾಡಿಕೊಳ್ಳುವುದಿಲ್ಲ, 'ತತ್ತಾ—ತತ್ತಾ' ಅನ್ನುವುದೊಂದೇ ಅವಳಿಗೆ ತಿಳಿದಿರುವುದು"

"ಇಷ್ಟಲ್ಲಾ ಯಾಕೆ ತಾಪತ್ರಯ ಪಡುತ್ತೀಯೋ ? ಅವಳಿಗೂ ದಾರಿ ತೋರಿಸಿಬಿಡೋಣ."

"ನೀನು ಸುಮ್ಮನಿರಪ್ಪ. ನಿನ್ನ ಮಾತು ಕೇಳಿದರೆ ತಲೆಗೆ ಬರುತ್ತದೆ. ನಮ್ಮ ಪರ್ಸನಲ್ ಅಸಿಸ್ಟೆಂಟ್ ಒಬ್ಬಳು ನಾಪತ್ತೆಯಾಗಿದ್ದಾಳೆ. ಮತ್ತೊಬ್ಬಳು ಖೂನಿಯಾಗಿದ್ದಾಳೆ—ಎಂದಾದರೆ ನಾವು ಬದುಕುವುದಕ್ಕಾಗುತ್ತದೆಯೇ ? ಅದೂ ಅಲ್ಲದೇ ಆ ಘಾತುಕ ಆರ್ಮ್ಯಾಗಂನನ್ನು ಪುನಃ ಉಪಯೋಗಿಸುವುದು ನನಗೆ ಇಷ್ಟವಿಲ್ಲ."

"ಅದು ನನಗೂ ಇಷ್ಟವಿಲ್ಲ. ಈಗಲೇ ಅವನು ತಲೆಯ ಮೇಲೆ ಹತ್ತಿ ಕುಳಿತುಬಿಟ್ಟಿದ್ದಾನೆ. ಆದರೂ ಈ ಹೊಸ ಹುಡುಗಿಯ ವಿಷಯದಲ್ಲಿ ತಾತ್ಸಾರ ಏಂದ ಇರಲಾಗುತ್ತದೆಯೇ ?"

"ಆದರೂ ಪರವಾಗಿಲ್ಲ. ನಾಲ್ಕು ದಿನ ಸುಮ್ಮನಿರು. ಅಷ್ಟರಲ್ಲಿ ಏನೂ ಮುಳುಗಿ ಹೋಗುವುದಿಲ್ಲ. ಪೋಲೀಸಿನವರಾಗಲೀ ಆ ಪತ್ತೇದಾರನಾಗಲೀ ನಮ್ಮನ್ನು ಏನೂ ಮಾಡುವಂತಿಲ್ಲ. ಈ ಹುಡುಗಿಯೊಡನೆ ಒಳ್ಳೆಯ ಮಾತು

ಗಳನ್ನಾಡುತ್ತಾ, ಆಗಾಗ ಒಂದಿಷ್ಟು ಹಣವನ್ನು ಕೊಡುತ್ತಾ ಕಾಲ ಕಳೆಯು ತ್ತೇನೆ, ನೋಡೋಣ."

"ಅದೆಲ್ಲಾ ಸರಿ. ನಮ್ಮ ರಂಗನಾಯಕಿಯಿಂದ ಇಷ್ಟು ಹೊತ್ತಿಗೆ ಟೆಲಿ ಗ್ರಾಂ ಬರಬೇಕಾಗಿತ್ತಲ್ಲವೇನಯ್ಯ ?"

ರಾಮಾನುಜ ಕೇಳಿದಂತಹ ಪ್ರಶ್ನೆಗೆ ಗಣೇಶಪಿಳ್ಳೆ ಉತ್ತರ ಕೊಡುವುದ ರೊಳಗಾಗಿ, ಆಗಂತುಕನೊಬ್ಬನು 'ಏನು, ನನ್ನ ತಂಗಿಯ ವಿಷಯವನ್ನೇನೋ ಮಾತನಾಡುತ್ತಿದ್ದೀರಿ' ಎನ್ನುತ್ತಾ ಒಳಗೆ ಬಂದ.

ಆಗಂತುಕನು ಬಿಳಿಯ ಪ್ಯಾಂಟ್ ಧರಿಸಿ ಕಂದು ಬಣ್ಣದ ಉಲ್ಲನ್ ಕೋ ಟು ಹಾಕಿಕೊಂಡಿದ್ದ. ಸುಮಾರು ಮೂವತ್ತು ವರ್ಷ ವಯಸ್ಸಿರಬಹುದು. ದಪ್ಪ ಪುಷ್ಟವಾಗಿ ಬೆಳೆದಿದ್ದಾನೆ, ತಲೆಯ ಮೇಲೆ ಗುಂಗುರಾಗಿ ಬೆಳೆದ ಒರಟು ಕೂದಲು. ಮುಖದಲ್ಲಿ ಯಾವುದನ್ನೂ ಗಣನೆಗೆ ತಂದುಕೊಳ್ಳದಂತಹ ನಿರ್ಲ ಕ್ಷ್ಯಭಾವ.

"ಬಾಯ್ಯ, ಬಾ. ಕುಳಿತುಕೋ" ಎಂದು ರಾಮಾನುಜಂ ಮಾತು ಆರಂಭಿಸಿದ.

ಅವನು ಕುಳಿತುಕೊಂಡನಂತರ ಹೇಳಿದ.

"ನಾವು ನಿನ್ನ ತಂಗಿಯ ವಿಷಯ ಮಾತನಾಡುತ್ತಿರಲಿಲ್ಲ, ಆರ್ಮುಗಂ"

ಹಾಗೆ ಹೇಳಿದ ರಾಮಾನುಜಂ ಆರ್ಮುಗಂನನ್ನು ನೋಡಿ ಅಂದು ಕೊಂಡ. ಆರ್ಮುಗಂ ಮತ್ತು ರಂಗನಾಯಕಿ ಇಬ್ಬರೂ ಅಣ್ಣತಂಗಿಯರೆಂದು ಹೇಳುತ್ತಾರೆ. ಎಷ್ಟೊಂದು ವಿಚಿತ್ರವಾಗಿದೆ. ರೂಪದಲ್ಲಿ, ನಡೆಯಲ್ಲಿ, ನುಡಿ ಯಲ್ಲಿ ಇಬ್ಬರಿಗೂ ಅರ್ಥಾರ್ಥ ಸಂಬಂಧವಿಲ್ಲ.

ಕುಳಿತುಕೊಂಡ ಆರ್ಮುಗಂ ಸುಮ್ಮನಿರಲಿಲ್ಲ. ಮಾತನಾಡತೊಡ ಗಿದ,

"ನೀವು ನನ್ನ ತಂಗಿಯ ವಿಷಯ ಮಾತನಾಡದೇ ಇರಬಹುದು. ಆದರೆ ನಾನು ನನ್ನ ತಂಗಿಯ ವಿಷಯ ಮಾತನಾಡುವುದಕ್ಕೆ ಬಂದಿದ್ದೇನೆ. ನೀವು ನಿಮಗೆ ತೋರಿದಂತೆ ಮಾಡುತ್ತೀರಿ. ಈ ಹೊಸ ಹುಡುಗಿಯನ್ನು ಕೆಲಸಕ್ಕೆ ತೆಗೆದುಕೊಳ್ಳುವಾಗ ಯಾರನ್ನು ಕೇಳಿದಿರಿ. ಅವಳೇನಾದರೂ ಬಾಯಿ ಬಿಟ್ರೆ ನನ್ನ ಗತಿಯೇನು ? ನನ್ನ ತಂಗಿಯ ಗತಿಯೇನು ?"

ಗಣೇಶ ಪಿಳ್ಳೆ ಹೇಳಿದ.

"ನೀವೇನು ಆ ವಿಷಯವಾಗಿ ಗಾಬರಿ ಪಡಬೇಕಾಗಿಲ್ಲ. ವಿಮಲೆ ಬಾಯಿ ಬಿಡುವುದಿಲ್ಲ. ಅದರ ಜವಾಬ್ದಾರಿಯು ನಮ್ಮದು."

"ಆಯಿತು, ಆಯಿತು. ಒಳ್ಳೆಯ ಜವಾಬ್ದಾರಿ! ಇದುವರೆವಿಗೆ ನೀವು ಹೇಳಿದಂತೆ ನಾನೂ ನನ್ನ ತಂಗಿಯೂ ನಡೆದುಕೊಂಡೆವು. ಅಲ್ಲಿಯವರೆವಿಗೆ ಸರಿ. ಈಗ ನಾನೂ ಅವಳೂ ನಮ್ಮ ತಲೆಯುಳಿಸಿ ಕೊಳ್ಳಬೇಕಾಗಿದೆ. ಆ ವಿಷಯದಲ್ಲಿಯೂ ನೀವು ಹೇಳಿದಂತೆ ಕೇಳಿಕೊಂಡಿರಲಾಗುವುದಿಲ್ಲ. ನಮ್ಮ ಯೋಚನೆ ನಾವು ಮಾಡಿಕೊಳ್ಳಬೇಕು."

ಆ ಮಾತು ಕೇಳಿ ರಾಮಾನುಜಂಗೆ ಗಾಬರಿಯಾಯಿತು. ಅವರೆ ಪಿಳ್ಳೆ ಸಮಾಧಾನವಾಗಿ ಉತ್ತರಕೊಟ್ಟ.

"ಅವರವರ ತಲೆ ಕಾದುಕೊಳ್ಳಲು ಅವರವರಿಗೆ ಪೂರ್ಣವಾಗಿ ಸ್ವಾತಂತ್ರ್ಯವಿದೆ. ಅದನ್ನು ಯಾರೂ ಇಲ್ಲವೆನ್ನುವುದಿಲ್ಲ. ಆ ವಿಷಯದಲ್ಲಿ ನೀನೇನು ಯೋಚನೆ ಮಾಡಿದ್ದೀಯೆ?"

"ನಾನೇನಾದರೂ ಯೋಚನೆ ಮಾಡಿರಲಿ. ಅದೊಂದೂ ನಿಮಗೆ ಮುಖ್ಯವಲ್ಲ. ನಾನದನ್ನು ನಿಮಗೆ ಹೇಳಬೇಕಾದ ಅಗತ್ಯವೂ ಇಲ್ಲ. ನಿಮಗೇನು ಗೊತ್ತು. ಆ ಹುಡುಗಿ ಯಾರೆಂದು ಬಲ್ಲಿರೋ? ನಾನವಳನ್ನು ಚೆನ್ನಾಗಿ ಬಲ್ಲೆ. ಷಂಷೀರ್ ಖಾನನ ಬಾಂಬೆ ಷೋಗೆ ಜೂಜಾಡುವುದಕ್ಕೆ ಜನಗಳನ್ನು ಕರೆತಂದು ಜನ ಕಳೆದುಕೊಂಡ ಹಣದ ಮೇಲೆ ಕಮಿಷನ್ ತೆಗೆದುಕೊಳ್ಳುತ್ತಿದ್ದಳು. ಅದು ನಿಮಗೆ ಗೊತ್ತೋ? ಷಂಷೀರ್ ಖಾನ್ ಯಾರೆಂಬುದಾದರೂ ನಿಮಗೆ ಗೊತ್ತೋ?"

"ನಮಗದು ಗೊತ್ತಿಲ್ಲ. ಇಂತಹ ಜನಗಳ ಪರಿಚಯವೇ ನಮಗೆ ಇಲ್ಲ."

ಆ ಮಾತನ್ನು ನಿರಾಳವಾಗಿ ಹೇಳಿದಂತಹ ಪಿಳ್ಳೆಯ ತರಹ ಆರ್ಮುಗಂಗೆ ಸರಿಬೀಳಲಿಲ್ಲ' ಆದರೂ ತನ್ನ ಮಾತನ್ನು ಮುಂದುವರಿಸಿದ.

"ಈಗ ವಿಮಲೆ ಎಲ್ಲಿದ್ದಾಳೆಂಬುದು ನಿಮಗೆ ಗೊತ್ತೋ?"

"ನಮಗೆ ಆ ವಿಷಯದಲ್ಲಿ ಆಸಕ್ತಿಯೇ ಇಲ್ಲ. ಇದುವರೆಗೆ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದಳು. ಸ್ವಲ್ಪ ಹೊತ್ತಿನ ಮೊದಲು ಹೊರಗೆ ಹೋದಳು.

ಅವಳು ಎಲ್ಲಿ ಬೇಕಾದರೂ ಇರಲಿ.

"ಅಷ್ಟೇ. ನಿಮ್ಮ ಬುದ್ಧೀ ಅಷ್ಟೇ. ಈಗ ಮೆಜೆಸ್ಟಿಕ್‌ನಲ್ಲಿ ಬಸ್‌ಗಾಗಿ ಕಾಯುತ್ತಾ ನಿಂತಿದ್ದಾಳೆ. ಸುಮಾರು ಮಲ್ಲೇಶ್ವರಕ್ಕೆ ಹೋಗಬಹುದು."

ಅವರೇನೂ ಮಾತನಾಡಲಿಲ್ಲ. ಆರ್ಮುಗಂ ಪುನಃ ಮುಂದುವರೆಸಿದ.

"ಅವಳ ವಿಷಯ ನಾನು ನೋಡಿಕೊಳ್ಳುತ್ತೇನೆ. ಅದಕ್ಕೆ ನೀವು ಪ್ರವೇಶಿಸಬೇಕಾಗಿಲ್ಲ. ಆ ಮುದುಕನ ಸಂಬಂಧವಾಗಿ ಕೊಟ್ಟಷ್ಟೇ ಕೊಡಿರಿ ಅಷ್ಟೇ ಸಾಕು. ನಾನು ಯಾವ ವಿಷಯದಲ್ಲಿಯೂ ಚೌಕಾಸಿ ಮಾಡಲಿಷ್ಟಪಡುವುದಿಲ್ಲ. ಹಣ ಸಿದ್ಧ ಮಾಡಿಟ್ಟಿರಿ. ನಾಳೆ ಇಷ್ಟು ಹೊತ್ತಿಗೆ ಬಂದು ತೆಗೆದುಕೊಂಡು ಹೋಗುತ್ತೇನೆ."

ಗಣೇಶ ಪಿಳ್ಳೆ ಸ್ವಲ್ಪವೂ ಉದ್ರೇಕಗೊಳ್ಳದೇ ಹೇಳಿದ.

"ನೀನು ಏನು ಬೇಕಾದರೂ ಮಾಡಿಕೋ. ಅದಕ್ಕೂ ನಮಗೂ ಸಂಬಂಧವಿಲ್ಲ. ನಮಗೆ ಒಪ್ಪಿಗೆ ಇಲ್ಲದಂತಹ ಕೆಲಸಕ್ಕೆ ನಾವು ಒಂದೇ ಒಂದು ಬಿಡಿಗಾಸು ಸಹ ಹಣ ಕೊಡುವುದಿಲ್ಲ. ನೀನು ನಾಳೆಯೂ ಬರಬೇಕಾಗಿಲ್ಲ. ಇನ್ನಾವಾಗಲೂ ಬರಬೇಕಾಗಿಲ್ಲ. ನಮಗೀಗ ಬೇಕಾಗಿರುವುದೇನೆಂದರೆ – ಆ ವಿಮಲೆ ಎಲ್ಲೆಲ್ಲಿ ಹೋಗುತ್ತಾಳೆ – ಏನೇನು ಮಾಡುತ್ತಾಳೆ – ಎಂಬುದನ್ನು ಕಾದು ನೋಡಿದರೆ ಸಾಕು."

ಆರ್ಮುಗಂ ಖಂಡಿತವಾಗಿ ಇಂತಹ ಜವಾಬನ್ನು ನಿರೀಕ್ಷಿಸಿರಲಿಲ್ಲ. ತಾನು ಈ ಇಬ್ಬರನ್ನೂ ದಬಾಯಿಸಿ ಬಿಡುತ್ತೇನೆಂದುಕೊಂಡು ಬಂದುದು ಪ್ರಯೋಜನವಾಗಲಿಲ್ಲ. ಅದೂ ಅಲ್ಲದೇ ಗಣೇಶಪಿಳ್ಳೆ ಮೊದ್ದ ಎಂದಿದ್ದ, ಆದರೆ ಅವನು ಮೊದ್ದನಾಗಿ ಕಂಡುಬರಲಿಲ್ಲ. ಎಷ್ಟೊಂದು ಮಾತುಗಳನ್ನಾಡಿಬಿಟ್ಟ.

ಒಂದು ಗಳಿಗೆಯ ಕಾಲ ಆರ್ಮುಗಂ ಮುಖ ಪೆಚ್ಚಾದುದನ್ನು ಗಮನಿಸಿ ಅದೇ ಸಮಯದಲ್ಲಿ ರಾಮಾನುಜಂ ಹೇಳಿದ.

"ಒಂದು ವಿಷಯ ನೀನು ಚೆನ್ನಾಗಿ ತಿಳಿದುಕೊಳ್ಳಬೇಕು, ಆರ್ಮುಗಂ. ಸುಮ್ಮನೆ ಹಾರಾಡಿದರೆ ಯಾವ ಪ್ರಯೋಜನವೂ ಇಲ್ಲ. ಈ ವ್ಯವಹಾರಕ್ಕೆ ನಾನೂ ಪಿಳ್ಳೆಯೂ ಯಜಮಾನರು. ನಿಮಗೆ ಬೇಕಾದರೆ ನಾವು ಹೇಳಿದಂತೆ ಕೇಳಿಕೊಂಡು ಇರಬೇಕು. ಇಲ್ಲದಿದ್ದರೆ ನಿನ್ನ ದಾರಿ ನಿನಗೆ, ನಮ್ಮ

ದಾರಿ ನಮಗೆ. ನೀನು ನಮ್ಮ ಮೇಲೆ ಅಧಿಕಾರ ಮಾಡಲಾಗುತ್ತದೆಂದು ಎಂದೂ ತಿಳಿದುಕೊಳ್ಳಬೇಡ.''

ಇದರಿಂದ ಆರ್ಮುಗಂಗೆ ಪುನಃ ಮುಖದ ಮೇಲೆ ತಣ್ಣೀರು ಎರಚಿದಂತಾಯಿತು. ಇಲ್ಲಿ ತನಗೇನೂ ಪ್ರಾಮುಖ್ಯತೆ ಇದ್ದ ಹಾಗಿಲ್ಲ. ಇದ್ದ ಹಾಗೇನು ಬಂದಿತು. ಇಲ್ಲವೇ ಇಲ್ಲವೆಂಬುದು ಖಚಿತವಾದ ಹಾಲ್ಲಾಯಿತು. ಇವರಿಗೆ ತಕ್ಕ ಪ್ರತೀಕಾರ ಮಾಡುವವರೆವಿಗೆ ತಾನು ತಲೆ ಎತ್ತಿಕೊಂಡು ತಿರುಗುವುದು ಸಾಧ್ಯವಿಲ್ಲ. ಆ ವಿಷಯದಲ್ಲಿ ಏನು ಮಾಡುವುದಕ್ಕೂ ತೋರದೇ ತಲೆ ತಗ್ಗಿಸಿಕೊಂಡು ಹೊರಟುಹೋದ,

ಅವನು ಹೋರಟುಹೋದ ಮೇಲೆ ಪಿಳ್ಳೆ ಅಂದ.

"ಅವನಂತೂ ಈಗ ಹೊರಟುಹೋದ. ಆದರೆ ಅವನನ್ನು ಸುಮ್ಮನೆ ಬಿಡಬಾರದು. ಒಂದು ಸ್ವಲ್ಪ ಬಿಸಿ ತಟ್ಟಿಸಿಬಿಡಬೇಕು."

''ಹಾಗಾದರೆ ನಡಿ. ಹೋಗಿ ನಮ್ಮ ಸರ್ದಾರ್‌ನೊಂದಿಗೆ ಮಾತನಾಡಿಕೊಂಡು ಬರೋಣ. ಅಲ್ಲ, ಆ ಆರ್ಮುಗಂ ಹೇಳಿದೆನಲ್ಲಾ. ವಿಮಲೆ ಮಲ್ಲೇಶ್ವರಕ್ಕೆ ಹೊರಟಿದ್ದಾಳೆಂದು. ಅಲ್ಲೇನು ಮಾಡುತ್ತಾಳೆ. ಅವಳ ಮನೆ ಚಾಮರಾಜಪೇಟೆ ಕಡೆಯಲ್ಲಿಯೇ ಅಲ್ಲವೇ ?"

"ಅವನ ತಲೆಕಾಯಿ. ಅವನಿಗೇನು ಗೊತ್ತು. ವಿಮಲೆ ನನ್ನೊಂದಿಗೆ ಹೇಳಿಬಿಟ್ಟುಹೋದಳು. ಅವಳು ಪಾಪುಲರ್‌ಗೆ ಹೊರಟಿದ್ದಾಳೆ. ಅಲ್ಲವಳ ಲೌವರ್ ಬರುತ್ತಾನಂತೆ. ಟ್ಯಾಕ್ಸೀ, ಆಟೋರಿಕ್ಷಾಗಳಲ್ಲಿ ಹೋಗಬೇಡ, ಬಸ್‌ನಲ್ಲಿ ಹೋಗು ಎಂದು ಹೇಳಿದ್ದೇನೆ. ಅದರಿಂದಲೇ ಅವಳು ಬಸ್‌ಗೆ ಕಾಯುತ್ತಾ ನಿಂತುಕೊಂಡಿರುವುದು.''

## ೧೦

ರಾತ್ರಿ ಸುಮಾರು ಎಂಟೂವರೆ ಗಂಟೆಯ ಸಮಯವಿರಬಹುದು. ವಿಮಲೆ ಪಾಪುಲರ್‌ಗೆ ಬಂದಳು. ದಂಡಿನ ಮತ್ತು ನಗರ ಪ್ರದೇಶದ ನಡುವೆ ಅದೊಂದು ದೊಡ್ಡ ಬಾರು. ವಿಶಾಲವಾದ ಕಾಂಪೌಂಡಿನಲ್ಲಿ ದೊಡ್ಡ ಪೆಟ್ಟಿಗೆ ಇದ್ದಂತಿದೆ. ಹೋಗಿ ಒಳಗಡೆ ಕುಳಿತುಕೊಂಡಳು.

ವಿಮಲ ಅಲ್ಲಿಗೆಷ್ಟೋ ಬಾರಿ ಬಂದಿದ್ದಾಳೆ. ಆದರೆ ಆಗ್ಗೂ ಈಗ್ಗೂ ಅಜಗಜಾಂತರ ವ್ಯತ್ಯಾಸ. ಅಂದೆಲ್ಲಾ ದುಡ್ಡಿಲ್ಲ, ಕಾಸಿಲ್ಲ. ಏನು ಮಾಡುವುದೆಂಬ ಯೋಚನೆ. ಈಗ ಅದೆಲ್ಲಾ ಇಲ್ಲ. ಪಕ್ಕದಲ್ಲಿರುವ ವ್ಯಾನಿಟೀ ಬ್ಯಾಗ್‌ನಲ್ಲಿ ಎರಡೋ ಮೂರೋ ನೂರು ರೂಪಾಯಿನ ನೋಟುಗಳು ಬಿದ್ದಿವೆ. ಚಿಲ್ಲರೇ ನೋಟುಗಳೂ ಇವೆ. ಇಂದಲ್ಲ, ನಾಳೇ ಪಿಳ್ಳೈ ಕೈ ತುಂಬಾ ಹಣ ಕೊಡುವಂತಹ ಆಸೆಯೂ ಇದೆ.

ಆಸೆಯಿದೆ. ಆದರೆ ವಸೂಲು ಮಾಡಲು ಒಂದು ಪ್ಲಾನ್ ಬೇಕು. ಅದೇನೆಂದು ಇನ್ನೂ ಖಚಿತವಾಗಿ ತೋರದೇ ಇದೆ.

ಅವಳಲ್ಲಿ ಕುಳಿತುಕೊಂಡ ಎರಡು ಗಳಿಗೆಗಳೊಳಗಾಗಿ ಆರ್ಮುಗಂ ಅತ್ತ ಕಡೆಗೆ ಬಂದ. ಅವನು ಬರುತ್ತಿದ್ದ ತರಹ ಅವಳ ಹತ್ತಿರಕ್ಕೇ ಬರುತ್ತಿದ್ದ ಹಾಗಿತ್ತು. ಬಂದು ಅವಳು ಕುಳಿತಿದ್ದ ಟೇಬಲ್‌ನಲ್ಲಿಯೇ ಕುಳಿತುಕೊಂಡ.

ಬಂದು ಹಾಗೆ ಕುಳಿತುಕೊಂಡವನು ಯಾರೋ ವಿಮಲೆಗೆ ಗೊತ್ತಾಗಲಿಲ್ಲ. ಅಥವಾ ಹಿಂದೆಲ್ಲಿಯಾದರೂ ನೋಡಿದ್ದುದು ಮರೆತುಬಿಟ್ಟಿದ್ದೇನೆಯೋ ಎಂದುಕೊಂಡಳು. ಇಲ್ಲ. ಬಹುಮಟ್ಟಿಗೆ ಇರಲಾರದು.

"ತಾವು ಯಾರೋ ಗೊತ್ತಾಗಲಿಲ್ಲ."

"ಗೊತ್ತಾಗುತ್ತದೆ. ಸ್ವಲ್ಪ ತಡೆದುಕೊಳ್ಳಿ."

ವಿಮಲೆಗೆ ಅಸಮಾಧಾನವಾಯಿತು. ಅದನ್ನು ವ್ಯಕ್ತ ಪಡಿಸುವಷ್ಟರಲ್ಲಿ ಬೇರರ್ ಬಂದುಕೊಂಡ. ಅವನಿಗೆ ಹೇಳಿದಳು.

"ನನಗೆ ಜಿನ್, ಲೈಂ ಕಾರ್ಡಿಯಲ್ ತೆಗೆದುಕೊಂಡು ಬಾ"

ತನಗಾಗಿ ಮಾತ್ರ ಆರ್ಡರ್ ಮಾಡಿದರೂ ಸಹ ಇನ್ನೂ ಕುಳಿತೇ ಇರುವ ಆ ಅಪರಿಚಿತನ ವಿಷಯದಲ್ಲಿ ಅವಳಿಗೆ ಅಸಮಾಧಾನವಾಯಿತು. ಆದರೆ ತನ್ನ ಮರ್ಯಾದೆ ಉಳಿಸಿಕೊಳ್ಳುವುದಕ್ಕಾಗಿ ಕೇಳಿದಳು.

"ನೀವೇನು ತೆಗೆದುಕೊಳ್ಳುತ್ತೀರಿ."

ಬೇರರ್ ಕಡೆ ತಿರುಗಿ ನೋಡಿ ಅವನೇ ಆರ್ಡರ್ ಮಾಡಿದ.

"ನನಗೂ ಅದೇ ತೆಗೆದುಕೊಂಡು ಬಾ."

ಅನಂತರ ವಿಮಲೆಯನ್ನು ಉದ್ದೇಶಮಾಡಿ ಅಂದ.

"ನನ್ನ ವ್ಯವಹಾರದಲ್ಲಿ ಮತ್ತೊಬ್ಬರು ಪ್ರವೇಶಿಸುವುದು ನನಗೆ ಸರಿ ಬೀಳುವುದಿಲ್ಲ."

"ನೀವು ಮಾತನಾಡುವುದು ನನಗೆ ಅರ್ಥವಾಗುವುದಿಲ್ಲ."

ವಾಸ್ತವವಾಗಿ ಅವನೇನು ಹೇಳುತ್ತಾನೆಯೋ ಅವಳಿಗೆ ಗೊತ್ತಾಗಿರಲಿಲ್ಲ.

"ಆ ಕುರಿಗಳಿಂದ ಎಷ್ಟು ವಸೂಲು ಮಾಡಿದ್ದೀಯೋ ?"

ಈಗ ಅರ್ಥವಾಗಲು ಆರಂಭವಾಯಿತು. ನೈಯ್ಯೋಳಗಿಂದ ಸ್ವಲ್ಪ ಚಳಿ ಬಂದ ಹಾಗೆ ಆಯಿತು. ಇದರೂ ಇದ್ದುದರಲ್ಲಿ ತಕ್ಕಮಟ್ಟಿಗೆ ಧೈರ್ಯ ತಂದು ಕೊಂಡು ಹೇಳಿದಳು.

"ಯಾವ ಕುರಿಗಳು. ನೀವು ಮಾತನಾಡುವುದೆಲ್ಲವೂ ನನಗೆ ಒಗಟು ಗಳಂತೆ ಇವೆಯಲ್ಲಾ"

"ಓಹೋ ! ನಿನಗೆ ಅರ್ಥವಾಗುವುದಿಲ್ಲವೋ ? ಆ ಗಣೇಶ, ಆ ರಾಮಾನುಜಂಗಳಿಂದ ಎಷ್ಟು ವಸೂಲು ಮಾಡಿದ್ದೀಯು ?"

ಅವನ ಏಕವಚನ ಪ್ರಯೋಗದಿಂದ ಕೋಪ ಬಂದರೂ ತಡೆದು ಕೊಂಡಳು.

"ನೀವು ಹೇಳುವ ರಾಮಾನುಜಂ ಯಾರೋ ನನಗೆ ಗೊತ್ತಿಲ್ಲ. ಗಣೇಶ ಪಿಳ್ಳೆಯವರು ಗೊತ್ತು. ಅವರ ಬಳಿ ನಾನು ಸ್ಟೆನೋಟೈಪಿಸ್ಟ್ ಕೆಲಸ ಮಾಡುತ್ತಿದ್ದೇನೆ"

"ಅದೆಲ್ಲಾ ನನಗೆ ಗೊತ್ತು. ನೀನು ಕೆಲಸಕ್ಕೆ ಹೋದ ದಿನದಿಂದ ನಿನ್ನ ಮೇಲೆ ನಿಗಾ ಇಡುತ್ತಿದ್ದೇನೆ. ಅವರ ವಿಷಯವಂತೂ ಬಿಡು. ಅವರು ಈ ಊರಿಗೆ ಬಂದುದು, ಇಲ್ಲಿ ವ್ಯಾಪಾರ ಷುರು ಮಾಡಿದುದು ಎಲ್ಲವೂ ನನಗೆ ಗೊತ್ತು"

"ಗೊತ್ತಿದ್ದರೆ ಗೊತ್ತಿರಲಿ"

"ಹೂಂ. ಪೂರಾ ಕೇಳು. ನೀನು ಹೋಗಿ ಸೇರಿದಂದಿನಿಂದ ನನಗೆ ಬರುತ್ತಿದ್ದ ಮಾಮೂಲಿಗೆ ಕಲ್ಲು ಬಿದ್ದಿದೆ"

ಅಸಮಾಧಾನದಲ್ಲಿಯೂ ನಗು ಬಂದಿತು, ಸುಮಲೆಗೆ.

"ಅದಕ್ಕೆ ನಾನೇನು ಮಾಡಬೇಕೆನ್ನುತ್ತೀರಿ ?"

ತಾನೇನೂ ಮಾಡಬೇಕಾದ್ದಿಲ್ಲವೆಂದು ಅವಳ ಮಾತಿನಲ್ಲಿ ಅರ್ಥವಿತ್ತು.

"ನೀನು ಮಾಡಬೇಕಾದ್ದು ಬಹಳವಿದೆ"

ಅಷ್ಟು ಹೊತ್ತಿಗೆ ಬೇರರ್ ಜಿನ್ ತಂದಿಟ್ಟ. ಗುಟುಕಿನಷ್ಟು ಕುಡಿದು "ಏನದು ?" ಎಂಬಂತೆ ವಿಮಲೆ ಅವನ ಕಡೆ ನೋಡಿದಳು.

"ಮುಂದೆ ಮಾತನಾಡುವ ಮೊದಲು ಒಂದು ವಿಷಯ ಹೇಳು. ಇದು ವರೆವಿಗೆ ಅದರಿಂದ ಎಷ್ಟು ವಸೂಲು ಮಾಡಿದ್ದೀ ?"

"ಇನ್ನೂರು ಮುನ್ನೂರು ರೂಪಾಯಿಗಳನ್ನು ಕೊಟ್ಟಿರಬಹುದು"

ಎಷ್ಟು ಕ್ಷುದ್ರವಾದ ಹಣವದು ಎಂಬಂತೆ ಆಮೂರ್ಗಂ ನಕ್ಕು ಹೇಳಿದ.

"ಅದೆಲ್ಲಾ ಪ್ರಯೋಜನವಿಲ್ಲ. ನೂರು, ಸಾವಿರಗಳನ್ನು ಕೇಳುವುದೂ ತೆಗೆದುಕೊಳ್ಳುವುದೂ ಉಪಯೋಗವಿಲ್ಲ. ಐವತ್ತು ಸಾವಿರ ರೂಪಾಯಿ ಕೇಳು. ನಾಳೇ ಸಾಯಂಕಾಲ ಆಫೀಸಿನಿಂದ ಬರುವುದರೊಳಗಾಗಿ ಕೇಳಿಬಿಡಬೇಕು"

ಆ ಮಾತು ಕೇಳಿ ವಿಮಲೆಗೆ ಗಾಬರಿಯಾಯಿತು.

"ಐವತ್ತು ಸಾವಿರ ರೂಪಾಯಿ. ಅವರು ಅಷ್ಟು ರೂಪಾಯಿ ಕೊಡು ತ್ತಾರೆಯೆ ?"

"ನನಗೆ ಗೊತ್ತಿಲ್ಲದೇ ನಾನು ಹೇಳುತ್ತೇನೆಯೆ ? ನೀನು ಕೇಳು. ಅವರು ಕೊಡುತ್ತಾರೆ. ತೆಗೆದುಕೊಂಡು ಬಾ. ನೀನು ತರುವ ಹಣವನ್ನು ಮೂರು ಭಾಗ ಮಾಡಬೇಕು. ನಿನಗೊಂದು ಭಾಗ. ನನಗೊಂದು ಭಾಗ. ನನ್ನ ಜೊತೆಯಲ್ಲಿ ಕೆಲಸಮಾಡುವವನಿಗೆ ಒಂದು ಭಾಗ"

"ತಾವು ಯಾರೆಂದು ಕೇಳಬಹುದೋ ?"

"ಕೇಳಬಹುದು. ಈಗ ನೀನೂ ನನ್ನ ಜೊತೆಯವಳೇ ಆಗಿದ್ದೀ. ಆದ ರಿಂದ ನಾನು ಯಾರೆಂಬುದನ್ನು ಹೇಳುತ್ತೇನೆ. ನಾನು ರಂಗನಾಯಕಿಯ ಅಣ್ಣ"

ರಂಗನಾಯಕಿಯ ಅಣ್ಣ ಹೇಳುವ ಮಾತನ್ನು ನಂಬದಿರುವುದು ಹೇಗೆ ? ಆ ಮಾತಿನಲ್ಲಿ ಅವಳಿಗೆ ನಂಬಿಕೆ ಬಂದಿತು. ಎಷ್ಟೊಂದು ಹಣ, ಎಷ್ಟೊಂದು ಹಣ ಕೈಗೆ ಬರುತ್ತದೆಂದು ಬಾಯಲ್ಲಿ ನೀರೂರಿತವಳಿಗೆ.

"ಕೊಡುತ್ತಾರೆ ಎನ್ನುತ್ತೀರೇನು ?"

"ಕೊಡದೇ ಏನು ಮಾಡುತ್ತಾನೆ ?"

ಹೇಳುವ ಮಾತಿನಲ್ಲಿ ಆರ್ಮುಗಂಗೆ ಪೂರ್ಣವಾಗಿ ನಂಬಿಕೆಯಿತ್ತು. ಅವನೇ ಹೋಗಿ ಹಣ ಕೇಳಿ ತೆಗೆದುಕೊಂಡುಬಿಡುತ್ತಿದ್ದ. ಆದರೆ ತಾನೂ ತಪ್ಪುಮಾಡಿದವನು. ಅದರಿಂದ ತನಗೆ ಅವರು ಕೊಡುವುದಿಲ್ಲ. ತಾನು ನೇರವಾಗಿ ಪೋಲೀಸಿನವರ ಬಳಿ ಹೋಗಿ ಮಾತನಾಡುವುದೂ ಸಾಧ್ಯವಿಲ್ಲ ವೆಂಬುದನ್ನು ಅವರು ಬಲ್ಲರು. ಅದರಿಂದಲೇ ಈ ಕೆಲಸ ವಿಮಲೆಯಿಂದ ಮಾಡಿಸಬೇಕೆಂದು ಆರ್ಮುಗಂ ಲೆಕ್ಕಹಾಕಿದ್ದ.

ವಿಮಲೆಯೂ ಈ ವಿಷಯವನ್ನು ಯೋಚಿಸಿದಳು. ಇವನು ಹೇಳಿದಂತೆ ಐವತ್ತು ಸಾವಿರ ರೂಪಾಯಿ ಕೇಳಿದರೆ ತನ್ನನ್ನು ಹುಚ್ಚಳೆಂದುಕೊಳ್ಳುವುದಿ ಲ್ಲವೇ ಎಂಬ ಭಾವನೆ ಆವಳಿಗೆ ಮೊದಲು ಬಂದಿತು. ಮರುಕ್ಷಣದಲ್ಲಿ ಯೋ ಚನೆ ಮಾಡಿದಳು. ಆರ್ಮುಗಂ ರಂಗನಾಯಕಿಯ ಅಣ್ಣ. ಅವನಿಗೆ ಎಲ್ಲವೂ ಗೊತ್ತಿರಲೇಬೇಕು. ಅಷ್ಟಲ್ಲದೇ ಐವತ್ತು ಸಾವಿರ ರೂಪಾಯಿ ಕೇಳು-ಎಂದು ಹೇಳುತ್ತಾನೆಯೇ ? ಆದರೂ ಪುನಃ ಗೊತ್ತಿದ್ದೋ ,ಗೊತ್ತಿಲ್ಲದೆಯೋ ಅವಳ ಬಾಯಲ್ಲಿ ಬಂದಿತು–

"ಕೊಡುತ್ತಾರೆ—ಎನ್ನುತ್ತೀರೇನು ?"

"ಯಾರಪ್ಪನ ಮನೇ ಗಂಟು ? ಕೊಡದೇ ಏನು ಮಾಡುತ್ತಾರೆ"

ತಾನು ತನ್ನ ಪ್ರಣಯಿಯನ್ನು ಭೇಟಿ ಮಾಡಲು ಪಾ ಪು ಲ ರ್ ಗೆ ಹೋಗುತ್ತೇನೆಂದು ವಿಮಲೆಯು ಗಣೇಶ ಪಿಳ್ಳೆಯೊಂದಿಗೆ ಹೇಳಿದ್ದಾಗ ಸುಳ್ಳು ಹೇಳಿರಲಿಲ್ಲ. ಸಾಯಂಕಾಲ ಕತ್ತಲಾದನಂತರ ಪಾಪುಲರ್‌ಗೆ ಬರುವುದಾಗಿ ಅವಳು ಆನಂದನಿಗೆ ಹೇಳಿದ್ದಳು.

ಆನಂದ್ ಒಳಗೆ ಬಂದವನು ತನ್ನ ಮನದನ್ನೆಯೊಡನೆ ಧೂರ್ತನಂತೆ ಕಂಡು ಬರುವ ಮತ್ತೊಬ್ಬನು ಕುಳಿತಿರುವುದನ್ನು ಗಮನಿಸಿದ. ಕೂಡಲೇ ವಿಮಲೆಯ ಮೇಲೆ ಸಣ್ಣ ಅಸಮಾಧಾನವಾಯಿತು. ಅನಂತರ ಅವನು ಬಂದಾಗ ಬೇರೇ ಜಾಗವಿಲ್ಲದೇ ಇದ್ದು ಇಲ್ಲಿ ಕುಳಿತಿರಬಹುದು—ಅಥವಾ ಒಬ್ಬಳೇ ಹೆಣ್ಣು ಕುಳಿತಿದ್ದಾಳೆಂದು ಹಟದಿಂದ ಬಂದು ಕುಳಿತಿರಬಹುದು. ಅದ ರಲ್ಲಿ ವಿಮಲೆಯದು ಏನು ತಪ್ಪು ಎಂದು ಸಮಾಧಾನವನ್ನು ತಂದುಕೊಂಡ.

ಹೋಗಿ ವಿಮಲೆಯ ಪಕ್ಕದಲ್ಲಿ ಕುರ್ಚಿಯನ್ನು ಎಳೆದುಕೊಂಡು ಕುಳಿತು ಕೊಂಡ ನಂತರವೂ ಆಮ್ರುಗಂ ಕುಳಿತುಕೊಂಡೇ ಇದ್ದ. ಅಷ್ಟೇ ಅಲ್ಲ. ವಿಮಲೆಯನ್ನು ಮರುಗುಟ್ಟಿಕೊಂಡು ನೋಡಿ ಹೇಳಿದ.

''ಇವನಾರು ? ಇಲ್ಲೇಕೆ ಬಂದ. ಹೋಗುವುದಕ್ಕೆ ಹೇಳು''

ಆ ಮಾತು ಕೇಳಿ ಆನಂದನಿಗೆ ಗಾಬರಿಯಾಯಿತು. ತನ್ನನ್ನು ಯಾರು ಎಂದು ಕೇಳುವಂತಹ ಇವನಾರು ? ವಿಮಲೆಯ ಕಡೆಗೆ ನೋಡಿದ. ಅವಳು ತಲೆ ತಗ್ಗಿಸಿಕೊಂಡು ಕುಳಿತಿದ್ದಾಳೆ. ಅಂದರೆ ಮಾತನಾಡದೇ ಇರುವಂತಹ ಏನಾದರೂ ವಿಷಯವಿರಬೇಕು. ಇರಲಿ, ಅವಳನ್ನು ಆಮೇಲೆ ಮಾತನಾಡಿ ನೋಣವೆಂದುಕೊಂಡು ಅಂದ.

"ಯಾರೊಂದಿಗೆ ಮಾತನಾಡುತ್ತಿದ್ದೀಯೆ. ಎದ್ದು ಹೋಗು"

ತಿರಸ್ಕಾರದಿಂದ ಆನಂದನಾಡಿದ ಮಾತು ಆಮ್ರುಗಂಗೆ ಚುಚ್ಚಿದಂತಾ ಯಿತು. ತಾನು ಮಾತನಾಡುತ್ತಾ ಕುಳಿತಿದ್ದ ಹೆಣ್ಣನ್ನು ಆಕ್ರಮಿಸಿರುವನಂತೆ ಅವನ ಪಕ್ಕದಲ್ಲಿ ಕುಳಿತಿದ್ದಾನೆ. ಮಾತನಾಡಿ ಮುಗಿಸುವುದರೊಳಗಾಗಿ ತನ್ನನ್ನು ಎದ್ದು ಹೋಗು ಎನ್ನುತ್ತಿದ್ದಾನೆ.

ಕೋಪದಿಂದ ಮುಂದೆ ಹೋಗಿ ಹೊರಗೆ ತೆಗೆದು ಎಸೆಯುವ ಸಾಮಾ ನನ್ನು ಕೈಯ್ಯಲ್ಲಿ ಹಿಡಿದುಕೊಳ್ಳುವಂತೆ ಆನಂದನ ಷರಟು ಹಿಡಿದುಕೊಂಡ.

ಆನಂದನೂ ಹಿಡಿಯಲಿಲ್ಲ. ಎದ್ದು ನಿಂತುಕೊಂಡು ತಾನೂ ಅವನ ಬಟ್ಟೆಯನ್ನು ಹಿಡಿದುಕೊಂಡು ಮುಖದ ಮೇಲೆ ಒಂದು ಪೆಟ್ಟು ಹಾಕಿದ.

ಮರುಕ್ಷಣದಲ್ಲಿ ಅವರು ಪರಸ್ಪರ ಹೊಡೆದಾಡತೊಡಗಿದರು. ಅಕ್ಕ ಪಕ್ಕದ ಟೇಬಲ್ಲುಗಳಲ್ಲಿ ಕುಳಿತಿದ್ದವರು ಜಗಳವನ್ನು ಬಿಡಿಸಲು ಬಂದರು. ಆದರೆ ಅವರುಗಳು ಬಿಡಿಸುವುದರೊಳಗಾಗಿ ಮೂರು ನಾಲ್ಕು ಮಂದಿ ಬಲ ವಾದ ಬೇರರ್‌ಗಳು ಅವರಿಬ್ಬರನ್ನೂ ಬಾರಿನಿಂದ ಹೊರಗೆ ಕರೆದುಕೊಂಡು ಹೋಗಿಬಿಟ್ಟರು.

ಬೇರರ್‌ಗಳು ಅವರಿಬ್ಬರನ್ನೂ ಹಿಡಿದುಕೊಂಡು ಹೊರಗಡೆ ಕರೆದು ಕೊಂಡು ಬರುವಷ್ಟು ಹೊತ್ತಿಗಾಗಲೇ ಹೊಡೆದಾಟ ನಿಂತುಹೋಗಿದ್ದಿತೆಂದೇ ಹೇಳಬೇಕು. ಆನಂದ್ ಹೊಡೆದಾಡಿದರೂ ಅಷ್ಟೇನೂ ಹಟವಾಗಿರಲಿಲ್ಲ.

ಒಬ್ಬನೇ ಅವನನ್ನು ನಡೆಸಿಕೊಂಡು ಹೊರಗೆ ಕರೆತಂದಿದ್ದ. ಅವರ್ಯಾರೆಂದು ಹಾಗಿಲ್ಲ. ಕೋಪಗೊಂಡು ನುಗ್ಗುವ ನಾಯಿಯನ್ನು ಹಿಡಿದುಕೊಂಡಿರುವಂತೆ ಇಬ್ಬರು ಬೇರರ್‌ಗಳು ಅವನನ್ನು ಹಿಡಿದುಕೊಂಡಿದ್ದರು. ಆನಂದ ವಿಮಲೆಯ ಜೊತೆಯಲ್ಲಿ ಹೋಗುತ್ತಿದ್ದಾಗಂತೂ ಹೋಗಿ ಮೇಲೆ ಬೀಳಲು ಎಷ್ಟೋ ಜಗ್ಗಾಡಿದ.

ಟ್ಯಾಕ್ಸಿಯಲ್ಲಿ ವಾಪ್ಸು ಹೋಗುವಾಗ ಆನಂದ ವಿಮಲೆಯನ್ನು ಕೇಳಿದ:

"ವಿಮಲಾ. ಅಲ್ಲಿ ಬಂದು ಕುಳಿತುಕೊಂಡಿದ್ದವನು ಯಾರು ?"

"ದೇವರಾಣೆಗೂ ಅವನಾರೆಂದು ಗೊತ್ತಿಲ್ಲ"

"ಮತ್ತೆ, ಅವನೂ ನಿನ್ನ ಟೇಬಲ್‌ನಲ್ಲಿ........

"ಅದೇ ಹೇಳುತ್ತೇನೆ, ಕೇಳಿ. ನೀವು ಇಲ್ಲಿ ಬರುವುದಕ್ಕೆ ಹೇಳಿದ್ದಿರಲ್ಲಾ ಎಷ್ಟೋ ಬೇಗ ಹೊರಡಬೇಕೆಂದರೂ ಆಫೀಸು ಬಿಟ್ಟು ಬರುವುದು ಎಂಟು ಗಂಟೆಯಾಯಿತು. ಬಂದು ಕುಳಿತುಕೊಂಡೆ. ನಿಜವಾಗಿ ನನಗೆ ಅವನ ಪರಿಚಯವಿಲ್ಲ. ಆದರೆ ಗುರುತಿದ್ದವನಂತೆ ಮಾತನಾಡಿಸಿಕೊಂಡು ಬಂದು ನನ್ನ ಬಳಿ ಕುಳಿತುಕೊಂಡ. ನಾನು ಮಾತನಾಡಿಸದಿದ್ದರೂ ಅವನೇ ಮಾತ ನಾಡಿಸಲು ತೊಡಗಿದ. ನಾನು ಬಾರುಗಳಲ್ಲಿ ಗಿರಾಕಿಗಳಿಗಾಗಿ ಕಾಯುವ ಹುಡುಗಿ ಎಂದುಕೊಂಡನೋ ಏನೋ ? ನೀವು ಎಷ್ಟು ಹೊತ್ತಿಗೆ ಬರುತ್ತೀರಿ. ಎಂದು ಪತರಗುಟ್ಟುತ್ತಿದ್ದೆ. ನೀವೇಕೆ ಬರುವುದು ತಡವಾಯಿತು"

"ನಾನು ಏಳು ಗಂಟೆಗೇ ಬಂದೆ. ನೀನು ಇರಲಿಲ್ಲ. ಬಹಳ ಹೊತ್ತು ಕಾದಿದ್ದೆ. ಬೇಜಾರಾಗಿ ಒಂದು ರೌಂಡ್ ಹಾಗೇ ತಿರುಗಾಡಿಕೊಂಡು ಬಂದೆ ಪುನಃ ಬರುವ ವೇಳೆಗೆ ನೀನು ಬಂದಿದ್ದೆ"

"ದೇವರ ದಯ-ನೀವು ಸಮಯಕ್ಕೆ ಸರಿಯಾಗಿ ಬಂದಿರಲ್ಲಾ"

ಅರ್ಧ ಮೈಲಿಯಷ್ಟು ದೂರ ಟ್ಯಾಕ್ಸಿ ಹೋಗುವವರೆವಿಗೆ ಸುಮ್ಮನಿದ್ದು ಆನಂತರ ಆನಂದ ಹೇಳಿದ.

"ನಾನೊಂದು ಮಾತು ಹೇಳುತ್ತೇನೆ, ಕೇಳುತ್ತೀಯಾ ?"

"ಹೇಳಿ. ನಾನು ಯಾವಾಗ ತಾನೇ ನಿಮ್ಮ ಮಾತು ಕೇಳಿಲ್ಲ"

"ಎಲ್ಲಿ ಕೇಳುತ್ತೀಯೆ ? ಸುಮ್ಮನೆ ಕೇಳುತ್ತೇನೆಂದು ಹೇಳುತ್ತೀಯೇ ! ವೈಯ್ಯಾಳೀಕಾವಲ್ ಕಂಪೆನಿಗೆ ಕೆಲಸಕ್ಕೆ ಹೋಗಬೇಡವೆಂದೆನಲ್ಲಾ ಕೇಳಿ

ದೆಯಾ:"

"ಅದೇ. ನಿಮಗೆ ಸಹಾಯವಾಗುತ್ತದೆಯೇನೋ ಎಂದು ಹೋದೆ. ನಾನು ನೋಡಿದ್ದರಲ್ಲಿ ಅಲ್ಲಿ ಯಾವ ದೋಷವೂ ಇರುವಂತೆ ಕಂಡುಬರಲಿಲ್ಲ"

"ನಾನು ಹೇಳುತ್ತೇನೆ, ಕೇಳು. ಆ ಕಂಪನಿಯಲ್ಲಿ ಸೇರಿರುವವರೆಲ್ಲರೂ ಕಳ್ಳಕೊರಮರು. ನಿನಗೆ ಗೊತ್ತಿಲ್ಲದಿದ್ದರೂ ಅಲ್ಲಿ ಬಂದು ಕುಳಿತುಕೊಂಡವನು ಅವರ ಗ್ಯಾಂಗಿಗೆ ಸೇರಿದವನಿರಬೇಕು. ಅವನೇನೋ ಮಾತನಾಡುವುದಕ್ಕಾಗಿ ಬಂದ. ನಾನು ಬಂದುದರಿಂದ ಸುಮ್ಮನಾದನೆಂದುಕೊಳ್ಳುತ್ತೇನೆ. ಒಟ್ಟಿನಲ್ಲಿ ಒಂದು ಮಾತು ಹೇಳುತ್ತೇನೆ, ವಿಮಲ. ನೀನು ಆ ಹಾಳು ಕೆಲಸಕ್ಕೆ ಹೋಗ ಬೇಡ"

"ನೀವು ಹೇಳುವುದೆಲ್ಲವೂ ಭ್ರಾಂತಿ. ಆದರೂ ಸಹ ನಾನು ಇನ್ನು ಮೇಲೆ ಆ ಕೆಲಸಕ್ಕೆ ಹೋಗುವುದಿಲ್ಲವೆಂದು ಮಾಡಿದ್ದೇನೆ"

"ಅದೇನು ಹಾಗೆ ತೀರ್ಮಾನ ಮಾಡಿದ್ದೀಯೆ ?"

"ನಾನು ಅಲ್ಲಿ ಹೋಗಿ ಕೆಲಸ ಮಾಡುವುದರಿಂದ ನಿಮಗೇನಾದರೂ ಸಹಾಯವಾಗುತ್ತದೆಯೇನೋ ಎಂದು ಹೋದೆ. ಅಂತಹದೇನೂ ಕಂಡು ಬರಲಿಲ್ಲ. ಅದರಿಂದ ಇನ್ನು ಮುಂದೆ ಅಲ್ಲಿಗೆ ಹೋಗಬೇಕಾದ್ದಿಲ್ಲವೆಂದು ಕೊಂಡೆ"

"ಹಾಗಾದರೆ ಖಂಡಿತವಾಗಿ ನಾಳೆಯಿಂದ ಹೋಗುವುದಿಲ್ಲವೋ ?"

ವಿಮಲೆ ನಗುತ್ತಾ ಆನಂದನ ಕೈ ತೆಗೆದುಕೊಂಡು ತನ್ನೆರಡು ಕೈಗಳ ಲ್ಲಿಯೂ ಹಿಸುಕುತ್ತಾ ಹೇಳಿದಳು.

"ಒಳ್ಳೇ ಮಾತು ಹೇಳುತ್ತೀರಲ್ಲಾ. ನೀವಿಷ್ಟು ಹೇಳಿದನಂತರ ನಾಳೆಯ ದಿನವೇ ಹೋಗುತ್ತಿರಲಿಲ್ಲ. ಆದರೆ ನಾಳೆ ಹೋಗಿ ಆತನಿಗೊಂದು ಮಾತು ಹೇಳಿ ಬಂದುಬಿಡುತ್ತೇನೆ"

"ಬೇಕಾಗಿಲ್ಲ. ನೀನು ಪುನಃ ಹೋಗಬೇಡ"

"ಚೆನ್ನಾಯಿತು. ಹಾಗೆ ಮಾಡಬಾರದು. ನಾನು ಹೋಗಿ ಕೇಳಿದ ಕೂಡಲೇ ಕೆಲಸ ಕೊಟ್ಟವರಿಗೆ ನಾನಿನ್ನು ಮೇಲೆ ಬರುವುದಿಲ್ಲವೆಂದು ಒಂದು ಮಾತನ್ನಾದರೂ ಹೇಳಿ ಬರಬೇಡವೇ ?"

ವಿಮಲೆ ಆ ಕಂಪನಿಗೆ ಹೋಗಿ ಕೆಲಸ ಮಾಡುವುದೇ ಆನಂದನಿಗೆ ಇಷ್ಟ ವಿರಲಿಲ್ಲ. ನಾಳೀ ಒಂದು ದಿನ ಹೋಗಿ ಬರುವುದರಲ್ಲಿ ಏನು ಮುಳುಗಿ ಹೋಗು ತ್ತದೆ. ಅದರಿಂದ ಅವನು ಅಡ್ಡಿಯೇನೂ ಹೇಳಲಿಲ್ಲ.

ಮಾಮೂಲಿನಂತೆ ಮಾರ್ಕೆಟ್ಟಿನ ಬಳಿ ಟ್ಯಾಕ್ಸಿಯಿಂದ ಇಳಿಯುತ್ತಾ ವಿಮಲೆಯು ಅಂದಳು.

"ನನಗೆ ಬೇಜಾರಾಗಿ ಹೋಗಿದೆ. ನಾಲ್ಕು ದಿನ ಮದರಾಸಿಗೆ ಹೋಗಿ ಬರಬೇಕೆಂದಿದ್ದೇನೆ"

ಇದ್ದಕ್ಕಿದ್ದಂತೆಯೇ ಹೇಳಿದ ಮಾತು ಆನಂದನಿಗೆ ವಿಪರೀತ ಆಶ್ಚರ್ಯ ವನ್ನು ಉಂಟು ಮಾಡಿತು. ಅವನೆಂದ.

"ಈಗೇನು ಅವಸರ ? ನಾಳೀ ಸಾಯಂಕಾಲ ಮಾತನಾಡಿಕೊಳ್ಳೋಣ"

ಮನೆಗೆ ಬಂದು ಊಟ ಮಾಡಿ ಮಲಗಿಕೊಂಡ ನಂತರವೂ ಆನಂದನಿಗೆ ನಿದ್ದೆ ಬರಲಿಲ್ಲ. ಇತ್ತೀಚೆಗೆ ನಡೆದ ಘಟನೆಗಳೆಲ್ಲವೂ ಅವನ ಮನಸ್ಸಿನಲ್ಲಿ ಬಂದು ಸುಳಿಯತೊಡಗಿದವು. ಘಟನೆಗಳಿಗಿಂತಲೂ ಹೆಚ್ಚಾಗಿ ಇತ್ತೀಚೆಗೆ ಪರಿ ಚಯವಾದ ಇಬ್ಬರು ಹುಡುಗಿಯರು ಹೆಚ್ಚಾಗಿ ಬಂದು ಸುಳಿದಾಡತೊಡಗಿದರು. ಅವರಲ್ಲಿ ವಿಮಲೆಗಿಂತಲೂ ಆಶೆಯೇ ಪ್ರಿಯಳಾಗಿ ಭಾಸವಾದಳು.

ರಾತ್ರಿ ಸುಮಾರು ಎರಡು ಎರಡೂವರೆ ಗಂಟೆಯ ಸಮಯದಲ್ಲಿ ಆರ್ಮು ಗಂಗೆ ಎಚ್ಚರವಾಯಿತು. ಅವನ ಮೈ ಎಲ್ಲವೂ ನೋಯುತ್ತಿತ್ತು. ತಲೆಯು ಸಿಡಿಯುತ್ತಿತ್ತು.

ಇದ್ದುದರಲ್ಲಿ ಸಮಾಧಾನ ಮಾಡಿಕೊಂಡು ನೋಡಿದ. ದೇಹದಲ್ಲಿ ನಾಲ್ಕೈದು ಕಡೆ ಬಟ್ಟೆ ಕಟ್ಟಿದ್ದಾರೆ. ತಲೆಗೆ ಬ್ಯಾಂಡೇಜ್ ಕಟ್ಟಿದ್ದಾರೆ. ನರ್ಸ್ ಒಬ್ಬಳು ನಿಂತಿದ್ದಾಳೆ. ಬಿಳೀ ಕೋಟು ಹಾಕಿಕೊಂಡು ನಿಂತಿರುವವನು ಡಾಕ್ಟರ್ ಇರಬೇಕು. ಕಾಕೀ ಬಟ್ಟೆಯವನಂತೂ ಪೋಲೀಸ್‌ನವನೇ !

ಅವನಿಗೆ ಗೊತ್ತಾಯಿತು, ತಾನಿರುವುದು ಆಸ್ಪತ್ರೆಯಲ್ಲೆಂದು.

ಡಾಕ್ಟರು ಅವನ ತಲೆಯ ಮೇಲೆ ಕೈಯ್ಯಿಟ್ಟು "ಹೇಗಿದ್ದೀಯೆ ?" ಎಂದು ಕೇಳಿದರು.

ಆರ್ಮುಗಂ ನೋವಿನಲ್ಲಿಯೂ ಒಂದು ಬಾರಿ ನಗುಮುಖ ಮಾಡಿದ.

ಡಾಕ್ಟರೇ ಮಾತನಾಡಿದರು.

"ತಿಳಿವು ಬರುತ್ತಿದೆ. ನೀವು ಈಗಲೇ ಈತನನ್ನು ತೊಂದರೆ ಪಡಿಸುವುದು ಸರಿಯಲ್ಲ"

ಕಾಕೀ ದಿರಸು ಹಾಕಿಕೊಂಡಿದ್ದಾತ ಹೇಳಿದ.

''ಇಲ್ಲ. ನಾವೂ ಆತನನ್ನು ತೊಂದರೆ ಪಡಿಸಲು ಇಷ್ಟಪಡುವುದಿಲ್ಲ. ಒಂದೋ ಎರಡೋ ಪ್ರಶ್ನೆ ಕೇಳುತ್ತೇನೆ. ಅಷ್ಟೇ''

ಅವರಿಬ್ಬರೂ ಮಾತನಾಡುತ್ತಿದ್ದಾಗ ಆ ಸುರ್ಜಿ ಡಿ ಂ ಕಣ್ಣು ಮುಚ್ಚಿಕೊಂಡಿದ್ದ. ಬರಬೇಕಾದ ಗಳಿಗೆಯು ಬಂದೇಬಿಟ್ಟಿದೆ. ಪೆಟ್ಟು ಬಿದ್ದು, ತಿಳಿವು ತಪ್ಪಿ ತನ್ನನ್ನು ಆಸ್ಪತ್ರೆಗೆ ತಂದುಹಾಕಿದ್ದಾರೆ. ಈಗ ಜ್ಞಾನ ಬರುತ್ತಿದೆ. ತನ್ನಿಂದ ಸ್ಟೇಟ್‌ಮೆಂಟ್ ತೆಗೆದುಕೊಳ್ಳಲು ಪೋಲೀಸಿನವರು ಬಂದಿದ್ದಾರೆ.

ಪೋಲೀಸಿನವರಿಗೆ ಈಗೇನು ಬೇಕಾಗಿದೆ ?

ರಾತ್ರಿ ತನ್ನನ್ನು ಸಾಯುವಂತೆ ಹೊಡೆದವರು ಯಾರೆಂಬುವನ್ನು ತಿಳಿದುಕೊಳ್ಳುವುದು ಅವರ ಉದ್ದೇಶ.

ಪೋಲೀಸಿನವರಿಗೆ ಏನು ಬೇಕೋ ಅದನ್ನು ತನಗೆ ತಿಳಿದಿರುವಷ್ಟು ಮಟ್ಟಿಗೆ ಸ್ಪಷ್ಟವಾಗಿ ಹೇಳುವುದು ಸಾಧ್ಯವಿಲ್ಲ. ಗಣೇಶಪಿಳ್ಳೆ, ರಾಮಾನುಜಂರ ಹೆಸರುಗಳನ್ನು ಹೇಳುವುದಂತೂ ಸಾಧ್ಯವೇ ಇಲ್ಲ. ಹೇಳಿದರೆ ತಾನು ಸಹ ಸಿಕ್ಕಿಹಾಕಿಕೊಳ್ಳುವುದು ಖಂಡಿತ. ತನ್ನ ಪ್ಲಾನ್‌ನಲ್ಲಿ ಏನೋ ಹೆಚ್ಚು ಕಡಿಮೆಯಾಗಿದೆ. ಹುಷಾರಾಗಿ ಆಸ್ಪತ್ರೆಯಿಂದ ಹೊರಗೆ ಹೋದಮೇಲೆ ಏನಾಗಿದೆಯೋ ನೋಡಿ, ಏನು ಮಾಡಬೇಕೋ ಅದನ್ನು ಮಾಡಬೇಕು.

ಸರಿ. ಹೇಳಬೇಕಾಗಿಯೇ ಬಂದರೆ ಹಿಂದಿನ ರಾತ್ರಿ ತಾನು ವಿಮಲೆಯೊಂದಿಗೆ ಕುಳಿತುಕೊಂಡಿದ್ದಾಗ ಬಂದ ಗಂಡಸಿನ ಹೆಸರು ಹೇಳಬೇಕು. ಅವನೇ ತನ್ನನ್ನು ಹೊಡೆದುದಾಗಿ ಹೇಳಬೇಕು.

ಅವನ ಹೆಸರು ಸಹ ಗೊತ್ತಿಲ್ಲ. ಗೊತ್ತಿಲ್ಲದಿದ್ದರೆ ತನಗೇನು ? ಪೋಲೀಸಿನವರಿಗೆ ತೀಟೆ ಹಿಡಿದಿದ್ದರೆ ಅವರೇ ಪತ್ತೆ ಮಾಡಿಕೊಳ್ಳಲಿ.

# ೧೧

ಬೆಳಗಾಗ ಆಫೀಸಿನಲ್ಲಿ ಕುಳಿತಿದ್ದಾಗ ಸೀತಮ್ಮ ಸಂಪತ್‌ಗೂ ಸುಂದರ್‌ಗೂ ಕಾಫೀ ತಂದು ಕೊಟ್ಟಳು.

ಎದುರಿಗೆ ಇದ್ದ ಕಾಫೀ ಕುಡಿದು ಬಟ್ಟಲು ಮೇಜದ ಮೇಲೆ ಇಡುತ್ತಾ ಸಂಪತ್ ಹೇಳಿದ.

"ಎಷ್ಟು ಯೋಚನೆ ಮಾಡಿದರೂ ಪ್ರೈಯ್ಯಾಳೀ ಕಾವಲ್ ಕಂಪನಿಯಲ್ಲಿಯೇ ಏನೋ ದೋಷವಿರುವಂತೆ ನನಗೆ ಕಾಣುತ್ತದೆ. ಆ ಕಂಪನಿಯ ಲೆಕ್ಕಾಚಾರಗಳೆಲ್ಲವನ್ನೂ ನಾವು ಸೂಕ್ಷ್ಮವಾಗಿ ಪರಿಶೀಲಿಸಬೇಕು"

"ಪರಿಶೀಲಿಸಿಬಿಡೋಣ. ಅದಕ್ಕೇನು ಮುಟ್ಟಬೇಕು"

"ಎಲ್ಲಾ ಹೀಗೆಯೇ ಮಾತನಾಡುತ್ತೀಯಲ್ಲಾ, ಸುಂದರ್. ಈಗಲೇ ನಮಗೆ ತಲೆ ಹೋಗುವಷ್ಟು ಕೆಲಸಗಳಿವೆ. ಇದರ ಮೇಲೆ ಆ ಕಂಪನಿಯ ಲೆಕ್ಕಾಚಾರಗಳನ್ನು ಕುಳಿತು ನೋಡಬೇಕೆಂದರೆ ಎಷ್ಟು ಕೆಲಸವಾಗುತ್ತದೆ, ನೋಡು"

"ಅದಕ್ಕೇ ನಾನು ಹೇಳುವುದು, ನೋಡಿ. ನಮ್ಮ ಆಫೀಸಿನಲ್ಲಿ ಒಬ್ಬ ಲೇಡೀ ಅಸಿಸ್ಟೆಂಟನ್ನು ಇಟ್ಟುಕೊಳ್ಳೋಣ ಎಂದು. ಆ ಚಲಂ ಇದ್ದಾರಲ್ಲ. ಅವರ ಆಫೀಸಿನಲ್ಲಿರುವ ಸ್ಟೆನೋಟೈಪಿಸ್ಟಳನ್ನೂ ನೋಡಿದರೆ ಹೊಟ್ಟೆ ಉರಿಯುತ್ತದೆ"

"ಲೇಡೀ ಟೈಪಿಸ್ಟ್ ಇರಬೇಕು, ಅವಳಿಗೆ ಬಾದಾಮಿಯಾ ಆಕಾರದ ಮುಖವಿರಬೇಕು. ಮುಖ ಚೆನ್ನಾಗಿರಬೇಕು. ದೇಹ ಆಕರ್ಷವಾಗಿರಬೇಕು. ಎಲ್ಲದಕ್ಕಿಂತಲೂ ಹುಡುಗಿ ಫ್ಯಾಷನಬಲ್ ಆಗಿರಬೇಕು-ಅಲ್ಲವೇ ?"

ಸಂಪತ್ ಏನು ಅರ್ಥವಿಟ್ಟುಕೊಂಡು ಮಾತನಾಡುತ್ತಿದ್ದಾನೆಂಬ ಅರ್ಥ ಸುಂದರ್‌ಗಾಯಿತು. ಆದರೂ ತನ್ನ ಮನೋಭಾವವನ್ನು ತೋರಿಸಿಕೊಳ್ಳದೇ ಮಾತನಾಡುವ ಕಾರ್ಯಾರ್ಥಿಯಂತೆ ಹೇಳಿದ.

'ನೀವೇ ನೋಡಿ. ನಾವೂ ಸಹ ಚಲಂಗೆ ಸರಿಸಮವಾಗಿ ಕೆಲಸಮಾಡುತ್ತಿರುವ ಪತ್ತೇದಾರರು. ಒಟ್ಟಿನಲ್ಲಿ ಇಲ್ಲಿ ಕೆಲಸ ಮಾಡುವ ಹುಡುಗಿ ನಮ್ಮ

ಘನತೆಗೆ ಪಕ್ಕ ಹಾಗಿರಬೇಕು"

ಸಂಪತ್ ನಕ್ಕು ಹೇಳಿದ.

''ಖಂಡಿತವಾಗಿ ಹೇಳಿಬಿಡುತ್ತೇನೆ, ತಿಳಿದುಕೋ, ಸುಂದರ್. ನಾನೇ ನಾದರೂ ಒಬ್ಬ ಸ್ಟೆನೋಟೈಪಿಸ್ಟಳನ್ನು ಕೆಲಸಕ್ಕೆ ತೆಗೆದುಕೊಳ್ಳುವುದಾದರೆ ಅವ ಳಿಗೆ ಐವತ್ತು ವರ್ಷದ ಮೇಲೆ ವಯಸ್ಸಾಗಿರುತ್ತದೆ. ಕಪ್ಪಗೆ ಇರುತ್ತಾಳೆ. ದಪ್ಪಗೆ ಗುಂಡಗೆ ಇರುತ್ತಾಳೆ''

ಸುಂದರ್ ಕೋಪದಿಂದ ಉತ್ತರಕೊಟ್ಟ.

''ಹೇಗಾದರೂ ಇರಲಿ ಬಿಡಿ. ನನಗೇನಾಗಬೇಕಾಗಿದೆ ? ನಾನೇನು ಅವಳನ್ನು ಮದುವೆ ಮಾಡಿಕೊಳ್ಳಬೇಕೇ ?"

ಇಬ್ಬರೂ ಗಳಿಗೆಯ ಹೊತ್ತು ಮಾತನಾಡಲಿಲ್ಲ. ಅಷ್ಟರಲ್ಲಿ ಆಶಾ ದೇವಿಯು ಆಫೀಸಿಗೆ ಬಂದಳು.

ಸಂಪತ್ ಆಶ್ಚರ್ಯದಿಂದ ಅವಳ ಕಡೆಗೆ ನೋಡಿದ.

"ನೋಡಿ. ಈ ದಿನ ಬೆಳಗಾಗ ಪೋಲೀಸ್‌ನವರು ಮಿ|| ಆನಂದ್ ರನ್ನು ದಸ್ತಗಿರಿ ಮಾಡಿಕೊಂಡು ಹೋದರಂತೆ"

ಆ ಮಾತು ಸಂಪತ್ ಸುಂದರರಿಬ್ಬರನ್ನೂ ವಿಸ್ಮಿತರನ್ನಾಗಿ ಮಾಡಿತು. ಆನಂದನ ದಸ್ತಗಿರಿಗೆ ಕಾರಣವೇನೆಂಬುದು ಅವರಿಗೆ ಗೊತ್ತಾಗಲಿಲ್ಲ.

"ಯಾಕೆ, ಏನಾಯಿತಂತೆ"

''ನಿನ್ನೆಯ ದಿನ ಆನಂದರು ಪಾಪುಲರ್‌ಗೆ ಹೋಗಿದ್ದರಂತೆ. ಅಲ್ಲಿ ಅವ ರಿಗೂ ಇನ್ನಾರೋ ಒಬ್ಬರಿಗೂ ಹೊಡೆದಾಟವಾಯಿತಂತೆ. ಆ ಇನ್ನೊಬ್ಬರಿಗೆ ಸಾಯುವಷ್ಟು ಪೆಟ್ಟು ಬಿದ್ದಿದೆ. ಅವರು ಆಸ್ಪತ್ರೆಯಲ್ಲಿದ್ದಾರೆ. ಅದರಿಂದ ಈ ದಿನ ಬೆಳಗಾಗ ಪೋಲೀಸಿನವರು ಆನಂದರನ್ನು ದಸ್ತಗಿರಿ ಮಾಡಿಕೊಂಡು ಹೋದರು. ಆನಂದ್ ತಾವು ಆತನನ್ನು ಹೊಡೆದುದು ಉಂಟೆಂದೂ ಆದರೆ ಅಷ್ಟೊಂದು ಹೊಡೆಯಲಿಲ್ಲವೆಂದೂ ಹೇಳುತ್ತಾರೆ ?"

''ನಿಮಗೆ ಇದೆಲ್ಲವೂ ಹೇಗೆ ಗೊತ್ತಾಯಿತು ?''

"ಈ ದಿನ ಬೆಳಗಾಗ ಆಫೀಸಿಗೆ ಹೋಗುವುದರೊಳಗಾಗಿ ನಮ್ಮ ಮನೆಗೆ ಬಂದು ಹೋಗುವುದರೊಳಗಾಗಿ ಹೇಳಿದರು. ಒಂಬತ್ತಾದರೂ ಬರಲಿಲ್ಲ. ಆಫೀಸಿಗೆ ಹೋಗಿ ನೋಡಿದೆ. ಆಗ ಅವರ ಗುಮಾಸ್ತೆ ವಿಷಯ ಹೇಳಿದರು.

ಸೆಂಟ್ರಲ್ ಪೋಲೀಸ್ ಸ್ಟೇಷನ್ನಿಗೆ ಹೋಗಿ ನೋಡಿಕೊಂಡು ಬಂದೆ"

ಸಂಪತ್ ಆಶಾದೇವಿಗೆ ಸಮಾಧಾನವನ್ನು ಹೇಳಿ ಸೆಂಟ್ರಲ್ ಪೋಲೀಸ್ ಸ್ಟೇಷನ್ನಿಗೆ ರಿಂಗ್ ಮಾಡಿದ. ಇನ್ಸ್‌ಪೆಕ್ಟರ್ ಇಬ್ರಾಹಿಂ ಸಾಹೇಬರು ಸಿಕ್ಕಿದರು. ಅವರು ಹೇಳಿದುದೆಲ್ಲವನ್ನೂ ಕೇಳಿ ಅನಂತರ ಹೇಳಿದ.

"ಇರಲಿ. ನಾನು ಬರುವವರೆವಿಗೆ ತಡೆಯಿರಿ. ಯಾವುದಕ್ಕೂ ಅವಸರ ಪಡಬೇಡಿ,

## ೧೨

ಮಧ್ಯಾಹ್ನ ಮೂರು ಗಂಟೆ.

ವಿಮಲ ಆಫೀಸಿನಲ್ಲಿ ಸೋಫಾದ ಮೇಲೆ ಕುಳಿತುಕೊಂಡು ಸಿಗರೇಟ್ ಸೇದುತ್ತಿದ್ದಳು. ಕೆಂಪು ಬಣ್ಣದ ತುಟಿಗಳು ಬಿಳೀ ಬಣ್ಣದ ಸಿಗರೇಟ್ ಹಿಡಿದು ಹೊಗೆಯುಗುಳುತ್ತಿದ್ದರೆ ಮತ್ತೊಮ್ಮೆ ನೋಡೋಣವೆನ್ನುವಂತಿತ್ತು.

ಒಳಗೆ ಬಂದ ಪಿಳ್ಳೆಯನ್ನು ಕುರಿತವಳು ಕೇಳಿದಳು.

"ಏನು, ನಿಮ್ಮ ಕೇಸು ಎಲ್ಲಿಯವರೆಗೆ ಬಂದಿತು ?"

ಅವಳು ಕೇಳುತ್ತಿದ್ದುದು ಯಾವ ವಿಷಯವೆಂಬುದು ಗೊತ್ತಿದ್ದರೂ ಕೇಳುತ್ತಿದ್ದ ತರಹ ಸರಿಬೀಳದೇ ಅಂದ.

"ಅದೇ, ಬಾಬೂರಾಯರ ............"

"ಅದಿರಲಿ. ನಿನ್ನ ಲೌವರ್‌ನನ್ನು ಹಿಡಿದು ಲಾಕಪ್ಪಿನಲ್ಲಿ ಹಾಕಿದ್ದರಂತಲ್ಲಾ. ಅದರ ವಿಷಯವೇನು, ಹೇಳು"

"ಅದೆಲ್ಲಾ ಸರಿಹೋಯಿತು. ಅವರನ್ನು ಬಿಟ್ಟುಬಿಟ್ಟರು. ಬೆಳಗಾಗ ನಾನೂ ಸೆಂಟ್ರಲ್ ಸ್ಟೇಷನ್ನಿಗೆ ಹೋಗಿದ್ದೆ. ನೀವು ಇಬ್ರಾಹಿಂ ಸಾಹೇಬರ ಬಳಿ ಹೋಗಿದ್ದಿರಲ್ಲಾ. ನಿಮಗೇನೂ ಗೊತ್ತಾಗಲಿಲ್ಲವೋ ?"

"ನಾನು ಅವರನ್ನು ವಿಚಾರಿಸಲಿಲ್ಲ. ನನಗೇನು ಸಂಬಂಧ? ಹೋಗಲಿ. ಆತನಿಗೆ ಬಿಡುಗಡೆಯಾದುದು ಹೇಗೆ ?"

"ಅದು ಹೇಗೆಂಬುದು ನನಗೆ ಸ್ಪಷ್ಟವಾಗಿ ಗೊತ್ತಾಗಲಿಲ್ಲ. ಪತ್ರೀ

ದಾರ್ ಸಂಪತ್‌ರು ಅಲ್ಲಿಗೆ ಹೋಗಿದ್ದರಂತೆ. ಅವರು ಯಾವು ಯಾವುದೋ ಅಳತೆಗಳು, ಸಿಗರೇಟ್ ಧೂಳು, ಭೂತ ಕನ್ನಡಿಯಲ್ಲಿ ನೋಡಿದ್ದೂ ಏನೇನೋ ಹೇಳಿ ಅವರನ್ನು ಬಿಡಿಸಿದರಂತೆ.''

''ಇದೆಲ್ಲಾ ಒಳ್ಳೆ ತಮಾಷೆಯಾಗಿದೆ, ಅಲ್ಲವೇ ?''

''ಪಿಳ್ಳೆ ಹೇಳುವ ಮಾತನ್ನೇನೋ ನಗುತ್ತಾ ಹೇಳಿದ್ದ. ಆದರೆ ಅವನು ನೋಡಿದ ದೃಷ್ಟಿ ವಿಚಿತ್ರವಾಗಿದ್ದಿತು. ಅವನ ನೋಟದಿಂದ ವಿಮಲೆ ಅಸ್ವಸ್ಥಳಂತೆ ಆದಳು. ದಿಗಿಲಾಯಿತು. ಆದರೂ ಆದ್ದುದರಲ್ಲಿ ಧೈರ್ಯ ತಂದು ಕೊಂಡು ಹೇಳಿದಳು.

''ಆ ಆರ್ಮುಗಂಗೆ ಆದಂತೆ ನನಗೂ ಏನಾದರೂ ಆಗಬಹುದೆಂದು ನೀವು ಭಾವಿಸಿರಬಹುದು. ಆದರೆ ನಾನು ನನಗೆ ಗೊತ್ತಿರುವ ವಿಷಯವನ್ನೆಲ್ಲಾ ಬರೆದು ಕವರಿನಲ್ಲಿಟ್ಟು ಸೀಲ್ ಮಾಡಿ, ಕವರನ್ನು ನನ್ನ ಸ್ನೇಹಿತರೊಬ್ಬರ ಬಳಿ ಕೊಟ್ಟಿದ್ದೇನೆ. ನನಗೇನಾದರೂ ಹೆಚ್ಚು ಕಡಿಮೆಯಾದರೆ ಆ ಸ್ನೇಹಿತರು ಆ ಕವರನ್ನು ಪೋಲೀಸಿನವರಿಗೆ ಕೊಡುತ್ತಾರೆ. ನಿಮ್ಮ ಪರ್ಸನಲ್ ಅಸಿಸ್ಟೆಂಟ್ ರಂಗನಾಯಕಿ ಗುಂಟಕಲ್ ಗಾಡೀ ಹತ್ತಿ ಹೈದರಾಬಾದಿಗೆ ಅಭಿಮುಖಳಾಗಿ ಹೋಗಿದ್ದಾಳೆಂಬ ವಿಷಯ ತಿಳಿದುಕೊಳ್ಳಲು ಪೋಲೀಸಿನವರು..........''

ಹೇಳಬೇಕಾದ್ದನ್ನು ವಿಮಲೆ ಹೇಳಿಬಿಟ್ಟಿದ್ದಳು. ತನಗೆ ಗೊತ್ತಿದ್ದಷ್ಟನ್ನೂ ಹೇಳಿಬಿಟ್ಟಿದ್ದಳು. ತನಗೆಷ್ಟೋ ವಿಷಯಗಳು ಗೊತ್ತೆಂದೂ ಅದಷ್ಟನ್ನೂ ಕಾಗದದಲ್ಲಿ ಬರೆದು ಸ್ನೇಹಿತರ ಕೈಯ್ಯಲ್ಲಿ ಕೊಟ್ಟಿರುವುದಾಗಿ ಹೇಳಿಬಿಟ್ಟಳು. ಅದು ಸುಳ್ಳು. ಆ ವಿಷಯದಲ್ಲಿ ಹಾಗವಳಿಗೆ ತೋರಿತ್ತು. ಬರೆದು ಸ್ನೇಹಿತರ ಬಳಿ ಕೊಡುವುದು ಅವಳಿಗೆ ಇಷ್ಟವೇ. ಆದರೆ ತನಗೆ ಗೊತ್ತಿರುವಷ್ಟಾದರೂ ಬರೆದು ಯಾರ ಕೈಗೆ ಕೊಡುವುದು ? ಅಂತಹ ಒಬ್ಬ ಪರಮಾಪ್ತನೇ ಅವಳಿಗಿಲ್ಲ.

ಆನಂದನ ಕೈಗೆ ಕೊಡಬಾರದೇಕೆ ? ಇಲ್ಲ. ವಂಚಕರು ಯಾರನ್ನೂ ನಂಬದಿರುವಂತೆ ಅವಳಿಗೆ ಅವನ ಮೇಲೆಯೂ ನಂಬಿಕೆ ಬರಲಿಲ್ಲ. ಅದೂ ಅಲ್ಲದೇ ಆ ದಿನ ಬೆಳಗಾಗ ತಾನೇ ಬಾಬೂರಾಯನ ಮೊಮ್ಮಗಳು ಆಶಾದೇವಿಯ ಜೊತೆಯಲ್ಲಿ ಹೆಚ್ಚು ಮಾತನಾಡಿದ್ದುದನ್ನು ನೋಡಿದ್ದಳು.

ಪಿಳ್ಳೆ ತಾನೂ ಸಹ ಕುಳಿತುಕೊಳ್ಳುತ್ತಾ ಹೇಳಿದ.

"ನೀನು ಬುದ್ಧಿವಂತಳೆಂಬುದು ನಿಜ, ವಿಮಲ. ಆದರೂ ಇಷ್ಟೊಂದು ತಲೆ ತಿರುಗಬಾರದು."

ಆ ಮಾತಿಗೆ ವಿಮಲ ಉತ್ತರ ಕೊಡಲಿಲ್ಲ. ಪಿಳ್ಳೆ ಬರುವ ಮೊದಲು ವಿಷಯವನ್ನು ಹೇಗೆ ಆರಂಭಿಸಿ ಅವನನ್ನು ಹಣ ಕೇಳುವುದೆಂದು ಯೋಚಿಸುತ್ತಿದ್ದಳು. ಈಗ ಬೇರೊಂದು ಆಲೋಚನೆ ಬಂದಿತು. ಹಣ ಕೇಳುವ ಮೊದಲು ತನಗೆ ಅಪಾಯವಾಗದಂತೆ ಏನಾದರೂ ಒಂದು ಏರ್ಪಾಡು ಮಾಡಿಕೊಳ್ಳಬೇಕೆಂದುಕೊಂಡಳು.

ತನಗೂ ಅವಳಿಗೂ ಏನಾದರೂ ಮಾತು ನಡೆಯದಿದ್ದರೆ ಹೇಗೋ ಹಾಗೆ ಪಿಳ್ಳೆ ಸರಳವಾದ ಧ್ವನಿಯಿಂದ ಕೇಳಿದ.

"ಬೆಳಗಿನಿಂದ ಯಾರಾದರೂ ಬಂದಿದ್ದರೇನು ?"

"ಇಬ್ಬರು ಮೂವರು ಬಂದಿದ್ದರು. ಮನೆಗಳನ್ನು ಕಟ್ಟಲು ಯಾವಾಗ ಆರಂಭಿಸುತ್ತೀರೆಂದು ಕೇಳಿದರು, ನನಗೆ ಗೊತ್ತಿಲ್ಲವೆಂದು ಹೇಳಿದೆ."

"ಕಾಗದಗಳು ಏನಾದರೂ ಬಂದಿವೆಯೇನು ?"

ವಿಮಲೆ ಎದ್ದು ಹೋಗಿ ಆ ದಿನ ಪೋಸ್ಟಿನಲ್ಲಿ ಬಂದಿದ್ದ ಕಾಗದಗಳನ್ನು ತಂದು ಮುಂದಿಟ್ಟಳು. ಪಿಳ್ಳೆ ಅವುಗಳನ್ನು ತೆಗೆದು ನೋಡಿದ. ಅವೆಲ್ಲವೂ ಮನೆಗಳನ್ನು ಕಟ್ಟಲು ಯಾವಾಗ ಮೊದಲು ಮಾಡುತ್ತೀರೆಂದು ಕೇಳುವ ಕಾಗದಗಳು. ಅದಕ್ಕೆಲ್ಲಾ ಸೂಕ್ತವಾದ ಉತ್ತರಗಳನ್ನು ಹೇಳಿದ. ಅಲಕ್ಷ್ಯದಿಂದ ಬರೆದುಕೊಂಡಳು, ವಿಮಲೆ.

ವಿಮಲೆ ಕಾಗದಗಳನ್ನು ಟೈಪ್ ಮಾಡುತ್ತಿದ್ದಾಗ ಒಬ್ಬ ಆಗಂತುಕನು ಒಳಗೆ ಬಂದ. ಅವನು ಗಣೇಶ ಪಿಳ್ಳೆಯನ್ನು ಉದ್ದೇಶ ಮಾಡಿ ಗಡುಸಾದ ಧ್ವನಿಯಿಂದ ಹೇಳಿದ.

"ನನ್ನ ಹೆಸರು ದಾಸಪ್ಪ ನಾಯ್ಡು. ನನ್ನದೊಂದು ಮೂರು ಸಾವಿರ ರೂಪಾಯಿ ನಿಮ್ಮ ಕಂಪನಿಯಲ್ಲಿ ಸಿಕ್ಕಿಹಾಕಿಕೊಂಡಿದೆ. ನೋಡಿದರೆ ನಿಮ್ಮ ಕಂಪನಿ ಮುಳುಗಿ ಹೋಗುವಂತಿದೆ. ನನ್ನ ಮೂರು ಸಾವಿರ ನಾನು ವಸೂಲು ಮಾಡಿಕೊಂಡು ಹೋಗಲು ಬಂದೆ"

ಅದಕ್ಕೆ ಪಿಳ್ಳೆ ಸಮಾಧಾನವಾಗಿ ಉತ್ತರ ಹೇಳಿದ.

"ತಾವೊಬ್ಬರೇ ಅಲ್ಲ, ದಾಸಪ್ಪನಾಯಿಡು ಅವರೇ ! ನಿಮ್ಮಂತೆಯೇ ಎಷ್ಟೋ ಜನ ದುಡ್ಡು ಕೊಟ್ಟಿದ್ದಾರೆ. ನಾನು ಈ ಕಂಪನಿಯಲ್ಲಿ ಕೆಲಸಗಾರ, ಅಷ್ಟೇ. ಈಗ ಈ ಕಂಪನಿಯ ವ್ಯವಹಾರವೆಲ್ಲವೂ ಪೋಲೀಸಿನವರ ಕೈಯ್ಯಲ್ಲಿ ಇದೆ. ಇಷ್ಟರಲ್ಲಿಯೇ ಒಬ್ಬ ಅಫಿಷಿಯಲ್ ರಿಸೀವರನ್ನು ಗೊತ್ತುಮಾಡ ಬಹುದು. ಆದಾದ ಕೂಡಲೇ ಎಲ್ಲವೂ ಒಂದು ಸ್ಥಿತಿಗೆ ಬರುತ್ತದೆ ತಾವೊಂದು ಅರ್ಜಿಯನ್ನು ಕೊಡೋಣವಾಗಲಿ. ನಾನು ಏನು ಮಾಡಬ ಹುದೋ ಅದೆಲ್ಲವನ್ನೂ ಮಾಡುತ್ತೇನೆ"

"ನಾನು ಅರ್ಜೀ ಗಿರ್ಜಿ ಕೊಡಲು ಬರಲಿಲ್ಲ. ನನ್ನ ಮೂರು ಸಾವಿರ ವಸೂಲು ಮಾಡಿಕೊಂಡು ಹೋಗಲು ಬಂದಿದ್ದೇನೆ. ನಾನು ನಿಮ್ಮಂತಹವರ ಕೈಗೆ ಸಿಕ್ಕಿ ಹಾಕಿಕೊಂಡಿರುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ನನ್ನ ಹೆಂಡತಿ ಹಣ ಕೊಟ್ಟುಬಿಟ್ಟಳು. ನಾನೇ ಬಂದು ಹಣ ಕೊಟ್ಟಿದ್ದರೆ ನಿಮ್ಮ ತರಹ ನೋಡಿ ಇದು ಖೋಟಾ ಕಂಪೆನಿ ಎಂದು ಪತ್ತೆ ಮಾಡಿಬಿಡುತ್ತಿದ್ದೆ"

ಆ ಮಾತು ಕೇಳಿ ಪಿಳ್ಳೆ ಅಸಮಾಧಾನದಿಂದ ಉತ್ತರಕೊಟ್ಟ.

"ನನಗೆ ಒಂದೂ ಗೊತ್ತಿಲ್ಲ. ನಿಮಗೇನಾದರೂ ಸಂದೇಹವಿದ್ದರೆ ಹೋಗಿ ಪೋಲೀಸಿನವರಲ್ಲಿ ಹೇಳಿಕೊಳ್ಳಿ. ನಿಮ್ಮಹಾಗೆ ಮಾತನಾಡುವವ ರೊಡನೆ ನನಗೇನೂ ಮಾತಿಲ್ಲ"

"ಓಹೋ ! ನೀನು ಮಾತನಾಡುವ ತರಹ ನೋಡಿದರೆ ನೀನು ಏನೂ ತಿಳಿಯದ ಪೆದ್ದನೆಂದು ಕಂಡುಬರುತ್ತದೆ. ಯಾರೋ ನಿನ್ನನ್ನು ಮುಂದಿಟ್ಟು ಕೆಲಸ ಮಾಡಿಸುತ್ತಿದ್ದಾರೆ"

ಪಿಳ್ಳೆಯೊಂದಿಗೆ ಮಾತನಾಡುತ್ತಿದ್ದ ನಾಯಿಡು ವಿಮಲೆಯ ಕಡೆಗೆ ತಿರುಗಿ ಹೇಳಿದ.

"ಓ ! ವಿಮಲ. ಹೇಗಿದ್ದೀಯೆ ? ನಿನ್ನನ್ನು ನೋಡಿ ಬಲುದಿನಗಳಾ ದುವು. ಷಂಷೀರ್‌ಖಾನ ಬಳಿ ಕೆಲಸ ಮಾಡುತ್ತಿದ್ದವಳು ಬಿಟ್ಟು ಬಿಟ್ಟೆ ಯೇನು? ಸರಿ. ನೀನೂ ಬಂದು ಈ ಗುಂಪಿಗೆ ಸೇರಿಕೊಂಡ ಹಾಗಿದೆಯಲ್ಲಾ"

ವಿಮಲಾ ಸಹ ಅವನ ಕಡೆ ದುರುಗುಟ್ಟಿಕೊಂಡು ನೋಡಿದಳು. ಅವ ಳಿಗೆ ಗೊತ್ತಿದ್ದ ಹಾಗೆ ದಾಸಪ್ಪನಾಯಿಡುವನ್ನು ಯಾವಾಗಲೂ ನೋಡಿದ

ನೆನಪೇ ಅವಳಿಗಿಲ್ಲ. ಆದರೂ ಅವನು ಹೇಳಿದ ಒಂದು ವಿಷಯ ನಿಜ ಅವಳು ಷಂಷೀರ್ ಖಾನನ ಬೊಂಬಾಯಿ ಹೋನಲ್ಲಿ ಕೆಲಸ ಮಾಡುತ್ತಿದ್ದುದುಂಟು.

ದಾಸಪ್ಪ ನಾಯಿಡು ಪುನಃ ಪಿಳ್ಳೆಯ ಕಡೆ ನೋಡಿ ಕೇಳಿದ.

"ನೀನು ಕಣ್ಣಪ್ಪ ಎಂಬ ಹೆಸರನ್ನು ಎಲ್ಲಿಯಾದರೂ ಕೇಳಿದ್ದೀಯೇನು ?"

ಪಿಳ್ಳೆ ದಿಗ್ಭ್ರಾಂತನಾಗಿ ನೋಡಿದ. ಪಿಳ್ಳೆಗೆ ಕಣ್ಣಪ್ಪನ ಪರಿಚಯವಿರಲಿಲ್ಲ. ಆದರೆ ಅವನು ವೇಷ ವೇಷಾಂತರಗಳನ್ನು ಧರಿಸಿ ಎಷ್ಟೋ ಜನರನ್ನು ವಂಚಿಸಿದ್ದಾನೆಂದೂ, ಎಷ್ಟೋ ದರೋಡೆಗಳನ್ನು ನಡೆಸಿದ್ದಾನೆಂದೂ ಕೇಳಿದ್ದ.

ಉತ್ತರ ಹೇಳದೇ ಸುಮ್ಮನೆ ಕುಳಿತಿದ್ದವನನ್ನು ಉದ್ದೇಶಮಾಡಿ ದಾಸಪ್ಪನಾಯುಡುವೇ ಹೇಳಿದ.

"ನಾನೇ ಕಣ್ಣಪ್ಪ. ಈಗ ಒಂದಿಷ್ಟು ಹಣ ಮಾಡಿದ್ದೇನೆ. ಮದುವೆಯಾಗಿದೆ. ಆದರಿಂದ ಆ ಕೆಲಸವೆಲ್ಲಾ ಬಿಟ್ಟು ಸಾಧುತ್ವ ತೆಗೆದುಕೊಂಡಿದ್ದೇನೆ. ಈಗ ನಿಜವಾದ ಹೆಸರಿನಿಂದ ಬದುಕಿದ್ದೇನೆ. ನಿನಗೇನಾದರೂ ಸಂದೇಹವಿದ್ದರೆ ಸರ್ದಾರನನ್ನು ಕೇಳು ಬೊಂಬೂ ಬಜಾರಿನಲ್ಲಿ ಅಲ್ಲವೇ ಅವನ ಅಂಗಡಿ. ಆ ಬೊಂಬಾಯಿ ಹೋಟಲಿಗೆ ಫೋನ್ ಮಾಡಿದರೆ ಬರ್ರುತ್ತಾನೆ. ಬೇಕಾದರೆ ಅವನನ್ನೇ ಕರೆದು ಕೇಳು"

ನಾಯಿಡು ಮುಂದುವರಿದು ಟೆಲಿಪೋನಿಗೆ ಕೈ ಹಾಕುವುದಕ್ಕೆ ಹೋದ. ಆಗ ಪಿಳ್ಳೆ ಮಾತನಾಡಿದ

"ಬೇಡಿ, ಇಲ್ಲಿಂದ ಹಾಗೆಲ್ಲಾ ಮಾತನಾಡಬೇಡಿ. ಪೋಲೀಸಿನವರು ಕದ್ದು ಕೇಳಿಸಿಕೊಳ್ಳಬಹುದು''

"ನನಗೇನು ಭಯ ? ನಾನು ಯಾರ ಮನೆಯನ್ನಾದರೂ ಮುಳುಗಿಸಿದ್ದೇನೆಯೇ ? ನನ್ನ ಹೆಂಡತಿ ಕೊಟ್ಟು ಸಿಕ್ಕಿಹಾಕಿಕೊಂಡಿರುವ ಹಣ ನನಗೆ ವಾಪ್ಸು ಸಿಕ್ಕುತ್ತದೆಯೋ ಇಲ್ಲವೋ ಎಂಬುದಷ್ಟೇ ನನಗೆ ಮುಖ್ಯ"

ಆ ಮಾತು ಕೇಳಿದ ಮೇಲೆ ಪಿಳ್ಳೆಗನ್ನಿಸಿತು. ತಾನಾಡಿದ ಮಾತ್ತು ತಪ್ಪಾಯಿತೆಂದು. ತಾನೇಕೆ ಸರ್ದಾರನಿಗೂ ತನಗೂ ಪರಿಚಯವಿದೆಯೆಂದು ತೋರಿಸಿಕೊಳ್ಳಬೇಕಾಗಿತ್ತು ? ಅವನೇನಾದರೂ ಮಾತನಾಡಿಕೊಳ್ಳಲಿ. ಸರ್ದಾರ್ ಏನು ಬೇಕಾದರೂ ಕೇಳಿಕೊಳ್ಳಲಿ ಎಂದು ತಾನು ಸುಮ್ಮನಿದ್ದರೆ ಚೆನ್ನಾಗಿದ್ದತೆಂದು ತೋರಿತು. ಆಡಿದ ಮಾತನ್ನು ತಿದ್ದಿಕೊಳ್ಳಲು ಹೇಳಿದ.

"ನನಗೂ ಭಯವಿಲ್ಲ. ಆವಶ್ಯಕವಿದ್ದರೆ ಯಾರಿಗೆ ಬೇಕಾದರೂ ಫೋನ್ ಮಾಡಿ"

ನಾಯಿಡು ನಡುಗುತ್ತಾ ಉತ್ತರ ಕೊಟ್ಟ.

"ಬಹಳ ಬುದ್ಧಿವಂತನಂತೆ ಮಾತನಾಡುತ್ತಿದ್ದೀ. ಯಾರಿಗೆ ಬೇಕಾದರೂ ಫೋನ್ ಮಾಡಬಹುದು ಅಲ್ಲವೇ ? ಸರ್ದಾರನಿಗೆ ಬೇಕಾದರೂ ಮಾಡಬಹುದು—ಪೋಲೀಸಿನವರಿಗೆ ಬೇಕಾದರೂ ಮಾಡಬಹುದು. ನಿನಗೆ ದಿಗಿಲಿಲ್ಲ, ಅಲ್ಲವೇ ? ಆದರೆ ನಿನ್ನೆಯ ರಾತ್ರಿ ಪಾಪುಲರ್ ಬಳಿ ಆಮುರ್ಗಂನನ್ನು ಹೊಡೆದವರಾರೆಂದು ತಿಳಿದುಕೊಳ್ಳುವುದರಲ್ಲಿ ಪೋಲೀಸಿನವರಿಗೆ ಬಹಳ ಆಸಕ್ತಿಯಿರಬಹುದು''

"ಆಮುರ್ಗಂ ಯಾರೋ ನನಗೆ ಗೊತ್ತಿಲ್ಲ"

ಪಿಳ್ಳೆ ಹೇಳುವುದಂತೂ ಹೇಳಿದ. ಆದರೆ ಆ ಮಾತು ಹೇಳಿದ ಕೂಡಲೇ ಮುಖ ಬಿಳಿಚಿಕೊಂಡಿತು.

ನಾಯಿಡು ವಿಮಲೆಯ ಕಡೆ ತಿರುಗಿ ನೋಡಿ ಅಣಕಿಸುವ ಧ್ವನಿಯಿಂದ ಕೇಳಿದ,

"ನಿನಗೂ ಆಮುರ್ಗಂ ಗೊತ್ತಿಲ್ಲ, ಅಲ್ಲವೇ ? ವಿಮಲ''

"ನಾನು ಅವನನ್ನು ನೋಡಿದ್ದೇನೆ. ಆದರೆ ಅವನೇನು ನನಗೆ ಬೇಕಾದವನಲ್ಲ''

"ನಿನಗೆ ಅವನು ಬೇಕಾದವನಲ್ಲ. ಆದರಿಂದಲೇ ಅವನು ಮುಖ ಮೂತಿ ಒಡೆದುಕೊಂಡನೆಂದು ಕಂಡು ಬರುತ್ತದೆ. ಬಾಷಾ ಎಂಬ ಹೆಸರು ಕೇಳಿದ್ದೀಯೋ ?''

ವಿಮಲೆ ಇಲ್ಲ ಎಂಬ ಅರ್ಥ ಬರುವಂತೆ ತಲೆಯಾಡಿಸಿದಳು.

"ಬಾಷಾ ನಿನಗೆ ಗೊತ್ತಿಲ್ಲ, ಅಲ್ಲವೇ ? ಮುಳ್ಳು ಮುಖದ ತುಟಿ ಹರಿದ ಗೂಂಡಾ ಅವನು. ಗುಜರಿ ಸಾಮಾನು ಮಾರುವ ಸರ್ದಾರನ ಶಿಷ್ಯ. ನಿನ್ನೆ ರಾತ್ರಿ ಪಾಪುಲರ್‌ನಲ್ಲಿ ನೀನೂ ಆಮುರ್ಗಂ ಕುಡಿಯುತ್ತಾ ಕುಳಿತಿದ್ದಿರಿ. ಅನಂತರ ಯಾರೋ ಒಬ್ಬಾತ ನಿನ್ನ ಪರಿಚಯದವನು ಬಂದ. ಅವನಿಗೂ ಆಮುರ್ಗಂಗೂ ಕೈ ಕೈ ಮಿಲಾಯಿಸಿತು. ಬಾರಿನವರು ಅವರಿಬ್ಬರನ್ನೂ ಹೊರಗೆ ಕರೆದುಕೊಂಡು ಹೋಗಿಬಿಟ್ಟರು. ಆಮುರ್ಗಂ ಹೊರಗೆ ಬರುವುದನ್ನೇ ಕಾದಿದ್ದ ಬಾಷಾ ಮತ್ತು ಅವನ ಸ್ನೇಹಿತರು ಮೈ ಮುರಿದು ಹೊಡೆದರು"

ಪಿಳ್ಳೆಗೆ ಯಾವುದನ್ನು ನಂಬುವುದು, ಯಾವುದನ್ನು ಬಿಡುವುದು ಎಂಬುದೇ ಕಷ್ಟವಾಗಿತ್ತು. ಆಮುರ್ಗಂಗೆ ಪೆಟ್ಟು ಬಿದ್ದುದು ಅವನಿಗೆ ಗೊತ್ತಿತ್ತು. ಆದರೆ ಹೊಡೆದವರಾರೆಂಬುದು ಗೊತ್ತಿರಲಿಲ್ಲ. ಅದೆಲ್ಲವನ್ನೂ ಸರ್ದಾರ್‌ಗೆ ಬಿಟ್ಟು ಬಿಟ್ಟಿದ್ದ. ಆದರೆ ಈ ದಾಸಪ್ಪ ಉರುಫ್ ಕಣ್ಣಪ್ಪನಿಗೆ ಎಲ್ಲವೂ ತಿಳಿದಿರುವಂತೆ ಇದೆ

ವಿಮಲೆ ದಿಗ್ಭ್ರಾಂತಳಾಗಿ ನೋಡುತ್ತಾ ಕೇಳಿದಳು.

"ಇದೆಲ್ಲಾ ನಿಮಗೆ ಹೇಗೆ ಗೊತ್ತು ?"

"ಈ ಕಂಪನಿಯಲ್ಲಿ ನನ್ನ ಹೆಂಡತಿಯ ಮೂರು ಸಾವಿರ ಮುಳುಗಿ ಹೋಗುತ್ತದೆ ಎಂಬುದು ಗೊತ್ತಾಗುತ್ತಲೇ ನೋಡಿಕೊಂಡು ಬಾ ಎಂದು ನನ್ನ ಸ್ನೇಹಿತನೊಬ್ಬನನ್ನು ಕಳುಹಿಸಿದೆ. ಅವನಿಗೆ ಪಿಳ್ಳೆ ಯಾರೆಂಬುದು ಗೊತ್ತಾಗಲಿಲ್ಲ. ನಿನ್ನನ್ನು ಗುರುತು ಹಿಡಿದ. ಸರಿ, ನಾನು ನಿನ್ನೆ ಸಾಯಂಕಾಲ ಹೊರಗಡೆ ಕಾದಿದ್ದು ನಿನ್ನನ್ನು ಅನುಸರಿಸಿ ಬಂದೆ. ಪಾಪುಲರ್‌ಗೆ ಬಂದು ಹೊರಗೆ ಹೋಗುವವರೆವಿಗೆ ನೀನು ಮಾಡುವುದನ್ನೆಲ್ಲಾ ಗಮನಿಸುತ್ತಿದ್ದೆ. ನೀನು ಇನ್ನಾರೊಂದಿಗೋ ಟ್ಯಾಕ್ಸಿಯಲ್ಲಿ ಹೊರಟು ಹೋದ ನಂತರ ಅಪಮಾನಿತನಾಗಿ ಹೋಗುತ್ತಿದ್ದ ಆಮುರ್ಗಂನನ್ನು ಬಾಷಾ ಸಮೀಪಿಸಿದ ದನ್ನು ನೋಡಿದೆ"

ಪುನಃ ಪಿಳ್ಳೆಯನ್ನು ಉದ್ದೇಶ ಮಾಡಿ ದಾಸಪ್ಪ ಹೇಳಿದ.

"ನೋಡು. ಒಂದಾನೊಂದು ಕಾಲದಲ್ಲಿ ನಾನೂ ಸಹ ಇಂತಹ ವ್ಯವಹಾರಗಳನ್ನು ಮಾಡುತ್ತಿದ್ದವನೇ. ನಿಮಗೆ ತೊಂದರೆ ಮಾಡುವುದು ನನಗೆ ಇಷ್ಟವಿಲ್ಲ. ನನ್ನ ಹೆಂಡತಿ ಕಳೆದುಕೊಂಡಿರುವ ಹಣ ವಾಪ್ಸು ಬಂದರೆ ನನಗೆ ಸಾಕು"

"ಈಗ ಕಂಪನಿಯ ವ್ಯವಹಾರವೆಲ್ಲವೂ ಪೋಲೀಸಿನವರ ಅಧೀನದಲ್ಲಿದೆ. ನಿಮಗೆ ಹಣ ಕೊಡಬೇಕೆಂದುಕೊಂಡರೂ ನನಗೆ ಅದು ಸಾಧ್ಯವಿಲ್ಲ. ನಾನು ಚೆಕ್ಕಿಗೆ ರುಜು ಮಾಡುವಂತಿಲ್ಲ"

"ಹಾಗೆಲ್ಲಾ ಹೇಳಿದರೆ ನಾನು ಮೋಸ ಹೋಗುವುದಿಲ್ಲ. ಚೆಕ್ಕಿಗೆ ರುಜು ಮಾಡಲು ನಿನಗೆ ಅಧಿಕಾರವಿಲ್ಲವೆಂಬುದನ್ನೂ ಬಲ್ಲೆ. ನಾನು ಅದನ್ನಲ್ಲ ಕೇಳುತ್ತಿರುವುದು. ನೀನು ಈಗಾಗಲೇ ತೆಗೆದು ಒಳಗೆ ಹಾಕಿರುವ ಹಣದಲ್ಲಿ ಕೊಡು ಅಂತ ನಾನು ಕೇಳುತ್ತಿರುವುದು"

ಆ ಮಾತು ಹೇಳುತ್ತಿದ್ದ ದಾಸಪ್ಪ ಇದ್ದಕ್ಕಿದ್ದಂತೆಯೇ ವಿಮಲೆಯನ್ನು ಉದ್ದೇಶ ಮಾಡಿ ಕೇಳಿದ.

"ಈ ಆಸಾಮಿ ಯಾಕೆ ಹೀಗೆ ಮಾತನಾಡುತ್ತಾನೆ ? ಇವನೇನು ನನ್ನ ಬಳಿ ಆಟವಾಡುತ್ತಿದ್ದಾನೆಯೋ, ಅಥವಾ ಇವನು ಯಾರ ಕೈಗೊಂಬೆಯೋ ಆಗಿ ಏನೂ ತಿಳಿಯದವನೋ ?"

ಬಹಳ ದಿನಗಳಿಂದಲೂ ವಿಮಲೆಯೂ ಇದೇ ಆಲೋಚನೆಯನ್ನು ಮಾಡುತ್ತಿದ್ದಳು. ಪಿಳ್ಳೆಯೇ ಈ ವ್ಯವಹಾರವನ್ನು ನಡೆಸುತ್ತಿದ್ದಾನೆಯೋ ಅಥವಾ ಯಾರ ಕೈಗೊಂಬೆಯಾಗಿಯಾದರೂ ಕುಳಿತಿದ್ದಾನೆಯೋ ಎಂದು- ಅವಳೇನೂ ಉತ್ತರ ಹೇಳಲಿಲ್ಲ-ಪಿಳ್ಳೆಯೇ ಹೇಳಿದ.

"ನೀವು ಇಷ್ಟು ಹೇಳಿದುದರಿಂದ ಹೇಳುತ್ತೇನೆ. ಈ ವ್ಯವಹಾರಗಳಲ್ಲಿ ನನಗೇನೂ ಸಂಬಂಧವಿಲ್ಲ. ಯಾರೋ ಒಬ್ಬರು ನನ್ನನ್ನು ಇಲ್ಲಿ ಕೆಲಸಕ್ಕೆ ಇಟ್ಟಿದ್ದಾರೆ. ಈಗ ನೀವು ಹೇಳಿದುದನ್ನೆಲ್ಲಾ ಅವರಿಗೆ ಹೋಗಿ ಹೇಳುತ್ತೇನೆ. ಅವರೇನು ಹೇಳುತ್ತಾರೆಂಬುದನ್ನು ನಿಮಗೆ ಬಂದು ತಿಳಿಸುತ್ತೇನೆ"

ಇಷ್ಟು ಹೊತ್ತೂ ಕುಳಿತುಕೊಂಡಿದ್ದ ದಾಸಪ್ಪ ನಾಯಿಡು ಮೇಲೆದ್ದು ನಿಂತುಕೊಂಡು ಹೇಳಿದ.

"ಅದು ಲೆಕ್ಕಾಚಾರದ ಮಾತು. ಈ ವ್ಯವಹಾರದ ಹಿಂದೆ ಯಾರಿದ್ದಾರೆಯೋ, ಯಾರಿಗಾಗಿ ನೀನು ಕೆಲಸ ಮಾಡುತ್ತಿದ್ದೀಯೋ ಅದೊಂದೂ ನನಗೆ ಮುಖ್ಯವಲ್ಲ. ನನ್ನ ಮೂರು ಸಾವಿರ ನನಗೆ ಮುಖ್ಯ. ನಾನು ರೆಕ್ಸ್ ಹೋಟಲಿನಲ್ಲಿರುತ್ತೇನೆ. ನಾಳೇ ಸಾಯಂಕಾಲ ಆರು ಗಂಟೆಯ ಒಳಗಾಗಿ ನನ್ನ ಹಣವನ್ನು ನೀನೇ ತಂದುಕೊಡಬೇಕು. ಅಥವಾ ಕಳಿಸಿಕೊಡಬೇಕು ಇಲ್ಲದಿದ್ದರೆ ಇಲ್ಲದ ತಂಟೆ ತಕರಾರುಗಳಿಗೆ ಸಿಕ್ಕಿಹಾಕಿಕೊಳ್ಳುತ್ತೀರಿ"

ದಾಸಪ್ಪ ನಾಯಿಡು ಇದಿಷ್ಟೂ ಮಾತುಗಳನ್ನು ಆಡಿ, ಪಿಳ್ಳೆಯ ಕಡೆ ತಲೆಯಾಡಿಸಿ, ಓರೆ ನೋಟದಿಂದ ವಿಮಲೆಯ ಕಡೆಗೆ ನೋಡಿ ಅಲ್ಲಿಂದ ಹೊರಟುಹೋದ.

ಪರಿಹಾಸ್ಯ ಮಾಡುವ ಒಂದು ಬಗೆಯ ಧ್ವನಿಯಲ್ಲಿ ವಿಮಲೆ ಕೇಳಿದಳು.

"ಪಿಳ್ಳೆಯವರೇ ! ಈಗೇನು ಮಾಡುತ್ತೀರಿ ?"

ಎಲ್ಲಿಯೋ ನೋಡುತ್ತಿದ್ದ ಪಿಳ್ಳೆ ವಿಮಲೆಯ ಕಡೆಗೆ ನೋಡಿದ ಭಾವರಹಿತವಾಗಿದ್ದ ಅವನ ಮುಖದಲ್ಲಿ ದ್ವೇಷವು ಮೂಡತೊಡಗಿತು.

"ಈ ರಗಳೆ ಎಲ್ಲವೂ ನಿನ್ನಿಂದ. ಸುಮ್ಮನೆ ಅಲ್ಲಿ ಇಲ್ಲಿ ಓಡಿಯಾಡಬೇಡವೆಂದು ನಿನಗೆ ನಾನೆಷ್ಟು ಬಾರಿ ಹೇಳಿದ್ದೇನೆ. ಅದೊಂದನ್ನೂ ಲಕ್ಷ್ಯ ಮಾಡಲಿಲ್ಲ. ನಿನ್ನೆಯ ದಿನ ಪಾಪುಲರ್‌ಗೆ ಹೋದೆ. ನಿನ್ನ ಲೌವರ್‌ನನ್ನು ನೋಡಬೇಕಾಗಿದ್ದರೆ ಅಲ್ಲಿಗೇ ಹೋಗಬೇಕಾಗಿತ್ತೇ ?"

ಅಣಕಿಸುವಂತೆ ನಕ್ಕಳು, ವಿಮಲೆ. ಪಿಳ್ಳೆ ಹೆದರಿದ್ದಾನೆಂದು ಅವಳಿಗೆ ಗೊತ್ತಾಗಿತ್ತು. ಕೆಲವು ನಿಮಿಷಗಳ ಮೊದಲು ತನಗೂ ಎಲ್ಲಿ ಅಮ್ಮರ್ಗಂಗೆ ಆದ ಹಾಗೆ ಆಗುತ್ತಿದ್ದಿತೋ ಎಂದು ಭಯವಿತ್ತು. ಈಗ ಅದೇನೂ ಇರಲಿಲ್ಲ. ಧೈರ್ಯವಾಗಿದ್ದಳು. ಅಪಾಯದಿಂದ ದಾಸಪ್ಪ ತನಗೆ ರಕ್ಷಣೆ ಕೊಡಬಲ್ಲನೆಂದು ಅವಳು ಊಹಿಸಿದ್ದಳು. ಹೊರಗೆ ಹೋಗುತ್ತಾ ದಾಸಪ್ಪ ನೋಡಿದ ರೀತಿಯನ್ನು ನೋಡಿದರೆ ಅವನಿಗೆ ತನ್ನಲ್ಲಿ ಆಸಕ್ತಿಯುಂಟಾಗಿದೆ ಎಂಬುದು ಖಚಿತವಾದ ಅಂಶ. ಈಗವಳು ಪಿಳ್ಳೆಗೆ ಹೆದರುತ್ತಿರಲಿಲ್ಲ.

"ಅಂದರೆ ನನ್ನನ್ನು ಕಂಡರೆ ನಿಮಗೆ ಸರಿಬೀಳುವುದಿಲ್ಲವೆಂಬಾಯಿತ

ಲ್ಲವೇ ? ನಾನು ಬೇಡವಾದರೆ ಏನಾದರೂ ಮಾಡಿ ನನ್ನನ್ನು ಕಳಿಸಿಬಿಡಬಹು ದಲ್ಲ"

ಆ ಮಾತು ಕೇಳಿ ಪಿಳ್ಳೆಗೆ ಮತ್ತಷ್ಟು ದಿಗ್ಭ್ರಾಂತಿಯಾಯಿತು.

"ನಾನು ಏನಾದರೂ ಮಾಡುವುದು ? ಆ........ನಾನು ಏನು ಮಾಡ ಬೇಕೆನ್ನುತ್ತೀಯೆ ?''

"ಅದೇನು ಕಷ್ಟವಿಲ್ಲ. ನಿಮ್ಮ ಪರ್ಸನಲ್ ಅಸಿಸ್ಟೆಂಟ್ ಒಬ್ಬಳು ಗೈರುಹಾಜರಿಯಾಗಿದ್ದಾಳೆ. ಮತ್ತೊಬ್ಬಳೂ ಯಾಕೆ ಮಾಯವಾಗಬಾರದು ? ಆದರೆ ನಾನು ಮಾಯವಾಗಬೇಕಾದರೆ ಐವತ್ತು ಸಾವಿರ ರೂಪಾಯಿ ಕೊಡ ಬೇಕು"

"ಏನು ವಿಮಲ........"

"ನನಗೆ ಆ ಕತೆಗಳೊಂದೂ ಬೇಡ. ನನಗೆ ಬೇಕಾದುದು ದುಡ್ಡು. ರೂಪಾಯಿ. ದಾಸಪ್ಪನಾಯಿಡೂರವರಿಗೆ ಹಣ ತೆಗೆದುಕೊಂಡು ಬರುವಾ ಗಲೇ ನನಗೂ ಹಣ ತಂದುಕೊಡಬೇಕು. ನಾನೂ ಹೋಗಿ ರೆಕ್ಸ್ ಹೋಟ ಲಿನಲ್ಲಿಯೇ ಇರುತ್ತೇನೆ. ನಾಳೇ ಸಾಯಂಕಾಲ ಜ್ಞಾಪಕವಿರಲಿ"

"ನನ್ನ ಮಾತು ಕೇಳು, ವಿಮಲ. ಅವಿವೇಕದಿಂದ ನಡೆದುಕೊಳ್ಳ ಬೇಡ. ನೀನು ರೆಕ್ಸ್ ಹೋಟಲಿಗೆ ಹೋಗಿರುವುದು ಬಹಳ ಅಪಾಯ. ಅದು ನೂರಾರು ರೂಪಾಯಿ ಖರ್ಚು ಮಾಡುವಂತಹ ದೊಡ್ಡ ಮನುಷ್ಯರು ಗಳು ಇರುವ ಹೋಟಲು. ನಿನ್ನಂತಹ ಸ್ವಲ್ಪ ಸಂಪಾದನೆಯುವಳು ಅಲ್ಲಿದ್ದೀ ಎಂದರೆ ಪತ್ತೇದಾರ ಸಂಪತ್‌ಗಾಗಲೀ ಅಥವಾ ಪೋಲೀಸಿನವರಿಗಾಗಲೀ ನಿನ್ನ ಮೇಲೆ ಸಂದೇಹ ಬರಬಹುದಲ್ಲವೇ ? ಅದೂ ಅಲ್ಲದೇ ನಿನ್ನೆಯ ದಿನ ರಾತ್ರಿ ನಡೆದ ಘಟನೆಯಿಂದ ಸಂಪತ್ ನಿನ್ನ ಮೇಲೆ ನಿಗಾ ಇಟ್ಟೇಇರುತ್ತಾನೆ"

"ಅದು ಸರಿ, ಅಣ್ಣಿ. ನಾನು ಕೇಳಿದ ಹಣ ನಾಳೆಯ ದಿನ ಸಾಯಂ ಕಾಲದೊಳಗಾಗಿ ಬರದಿದ್ದರೆ ಪೋಲೀಸಿನವರು ಅಥವಾ ಸಂಪತ್ ಹುಡುಕಿ ಕೊಂಡು ಬರುವವರೆವಿಗೆ ನಾನು ಕಾಯುವುದಿಲ್ಲ. ನಾನೇ ಹೋಗಿ ನನಗೆ ಗೊತ್ತಿರುವುದನ್ನೆಲ್ಲಾ ಹೇಳುತ್ತೇನೆ"

ತಾನಾಡಿದ ಮಾತಿಗೆ ಅವನೇನು ಉತ್ತರ ಕೊಡುತ್ತಾನೆ ಎಂಬುದ ಕ್ಕಾಗಿ ಅವಳು ಕಾಯಲಿಲ್ಲ. ಎದ್ದು ನಿಂತುಕೊಂಡು ಹೇಳಿದಳು.

"ನನಗೆ ಈ ಆಫೀಸು ಬೇಜಾರಾಗಿದೆ. ಇನ್ನು ನಾನಿಲ್ಲಿ ಬರುವುದಿಲ್ಲ ನಾಳೀ ಸಾಯಂಕಾಲ ರೆಕ್ಸ್ ಹೋಟಲಿಗೆ ಬರುವುದನ್ನು ಮರೆಯಬೇಡ''

## ೧೩

"ಗೊತ್ತು. ಆತನ ವಿಷಯ ಗೊತ್ತು. ಈ ದಿನ ಬೆಳಗಾಗ ಆ ನಾಯಿಡು ಇಲ್ಲಿಗೆ ಬಂದಿದ್ದ''

ಮಧ್ಯಾಹ್ನ ನಾಲ್ಕು ಗಂಟೆಯ ಸಮಯದಲ್ಲಿ ಹಳೀ ಕಬ್ಬಿಣದ ಅಂಗಡಿ ಯಲ್ಲಿ ಕುಳಿತು ರಾಮಾನುಜಂ ಮತ್ತು ಗಣೇಶ ಪಿಳ್ಳೆ ಸರ್ದಾರ್‌ಸಾಬ್ ಹೇಳಿದ ಮಾತನ್ನು ಕೇಳುತ್ತಿದ್ದರು.

ಗಳಿಗೆ ತಡೆದು ರಾಮಾನುಜಂ ಕೇಳಿದ.

"ಬಂದು ಏನು ಕೇಳಿದನೋ?"

"ಎಲ್ಲವನ್ನೂ ಕೇಳಿದ. ಪಿಳ್ಳೇ ಒಬ್ಬರೇ ಈ ವ್ಯವಹಾರದಲ್ಲಿದ್ದಾರೋ ಅಥವಾ ಮತ್ತಾರಾದರೂ ಇದ್ದಾರೋ ಎಂದು ಕೇಳಿದ. ಅಂತೂ ನಾನೂ ಸಹ ನಿಮಗೆ ಕುಮ್ಮಕ್ಕಾಗಿದ್ದೇನೆ-ಎಂದು ಅವನ ಭಾವನೆ''

"ನೀವೇನು ಹೇಳಿದಿರಿ?"

"ನಾನೇನು ತಾನೇ ಹೇಳುತ್ತೇನೆ? ನನಗೊಂದೂ ಗೊತ್ತಿಲ್ಲವೆಂದು ಹೇಳಿದೆ. ಗಣೇಶ ಪಿಳ್ಳೆ ಎಂಬ ಹೆಸರನ್ನೇ ಕೇಳಿಲ್ಲವೆಂಬುದಾಗಿ ಹೇಳಿದೆ."

"ಆ ದಾಸಪ್ಪನಾಯಿಡುವಿನ ವಿಷಯ ನಿಮಗೇನು ಗೊತ್ತು ಸಾಹೇಬರೇ!"

"ನನಗೆ ಅಷ್ಟೇನೂ ಚೆನ್ನಾಗಿ ಗೊತ್ತಿಲ್ಲ. ಕಣ್ಣಪ್ಪ ಎಂದ ಕೂಡಲೇ ತಕ್ಷ ಮಟ್ಟಿಗೆ ನಿಗಾ ಬಂತು-ಆದರೆ ಅವರ ಲೈನೇ ಬೇರೇ. ನಮ್ಮ ಲೈನೇ ಬೇರೇ. ಆದರೆ ಇತ್ತೀಚೆಗೆ ಕಣ್ಣಪ್ಪನ ಗಲಾಟೆಯೇನೂ ಇಲ್ಲ. ಸುಮಾರು ಎರಡು ವರ್ಷದ ಹಿಂದೆ ಅವನ ಮೇಲೆ ಕೊಲೆಯ ಆಪಾದನೆಯೊಂದು ಬಂದಿತ್ತು ಹೈಕೋರ್ಟಿನಲ್ಲಿ ಬಿಡುಗಡೆಯಾಯಿತು. ಅದಾದ ನಂತರ ಪುನಃ ಅವನ

ಹೆಸರೇ ಎಲ್ಲಿಯೂ ಕೇಳಿಬರಲಿಲ್ಲ"

ರಾಮಾನುಜಂ ಆಗಲೀ, ಪಿಳ್ಳೆಯಾಗಲೀ ಮಾತನಾಡಲಿಲ್ಲ. ಅದನ್ನು ಗಮನಿಸಿ ಸರ್ದಾರನೇ ಹೇಳಿದ.

"ನನ್ನ ಮಾತು ಕೇಳುವುದಾದರೆ ನೋಡಿ, ಆ ನಾಯಿಡುಗೆ ಅವನು ಕೇಳುವ ಮೂರು ಸಾವಿರ ರೂಪಾಯಿ ಕೊಟ್ಟು ಬಿಡಿ. ನೀವು ಎರಡು ಲಕ್ಷ ಎಪ್ಪತ್ತು ಸಾವಿರ ರೂಪಾಯಿಗಳನ್ನು ತಗೆದುಕೊಂಡಿದ್ದೀರಿ. ಅದರಲ್ಲಿ ಮೂರು ಸಾವಿರ ಕೊಟ್ಟರೆ ನಷ್ಟವೇನಂತೆ ?"

ಆ ಮಾತು ಕೇಳಿ ಪಿಳ್ಳೆ ಹೇಳಿದ.

"ಅದು ದೊಡ್ಡ ವಿಷಯವೇನಲ್ಲ. ಅವನಿಗೆ ಮೂರು ಸಾವಿರ ಬೇಕಾದರೆ ಕೊಟ್ಟು ಬಿಡಬಹುದು. ಈಗ ಬಂದಿರುವ ತಕರಾರು ಆ ವಿಮಲೆಯದು. ಅವಳಿಗೆ ಐವತ್ತು ಸಾವಿರ ರೂಪಾಯಿ ಬೇಕಂತೆ"

"ಐವತ್ತು ಸಾವಿರ ರೂಪಾಯಿ. ಈ ವ್ಯವಹಾರದಲ್ಲಿ ಇಷ್ಟೊಂದು ಹಣ ಇದೆ ಎಂದು ಅವಳಿಗೆ ಗೊತ್ತಾದುದು ಹೇಗೆ ? ಪರವಾಯಿಲ್ಲ, ಎನ್ನಿ. ಅವಳನ್ನು ಸರಿಮಾಡುವುದು ಕಷ್ಟ ಸಾಧ್ಯವಾದುದೇನಲ್ಲ."

"ಅದೇ ನಾನೂ ಹೇಳುವುದು. ಸರಿಯಾದ ಜನರಾದರೆ ನಾವೇನೂ ಯೋಚನೆಯೇ ಮಾಡಬೇಕಾಗಿಲ್ಲ. ಈ ಆರ್ಮುಗಂ, ಈ ವಿಮಲೆ ಇಂತಹ ವರದೇ ಬಹಳ ರಗಳೆ. ಅವರಿಗೆಷ್ಟು ಕೊಟ್ಟರೂ ತೃಪ್ತಿಯಿಲ್ಲ"

"ಅದಕ್ಕೇಕೆ ಯೋಚನೆ ಮಾಡುತ್ತೀರಿ, ಪಿಳ್ಳೇ ಸಾಬ್. ಬೇಕಾದರೆ ಅವಳನ್ನೂ ಮುಗಿಸಿಬಿಡೋಣ. ಎರಡೂ ಒಂದೇ ಖರ್ಚಾಗುತ್ತದೆ"

"ಆ—ಒಂದೇ ಖರ್ಚು. ಒಬ್ಬ ಹೆಣ್ಣನ್ನು ತೀರಿಸಲು ಐವತ್ತು ಸಾವಿರ ರೂಪಾಯಿ ಕೊಡಬೇಕೇ ?"

ಪ್ರಶ್ನೆಯು ಕೇಳಲ್ಪಟ್ಟ ಕೂಡಲೇ ಸರ್ದಾರ್ ಉತ್ತರ ಹೇಳಲಿಲ್ಲ. ಕುಳಿತಿದ್ದ ಬೆಂಚಿನ ಮೇಲೆ ಪಕ್ಕದಲ್ಲಿದ್ದ ಲಂಬಾ ಬೀಡಿಯನ್ನು ತೆಗೆದು ಹಚ್ಚಿಕೊಂಡು, ದಪ್ಪವಾದ ತುಟಿಗಳಿಂದ ಬೇಗ ಬೇಗನೆ ಹೊಗೆಯನ್ನು ಎಳೆದು ಬಿಡು ಬಿಟ್ಟು ನಿಧಾನವಾಗಿ ಹೇಳಿದ.

"ಯಾಕೆ ಹಾಗೆನ್ನುತ್ತೀರಿ. ನಿನ್ನೆಯ ದಿನ ನಾವು ಮಾಡಿಸಿದ ಕೆಲಸ ಸಾಧಾರಣವಾದುದು. ಆರ್ಮುಗಂ ಪೆಟ್ಟು ತಿಂದರೂ ಬಾಯಿ ಮುಚ್ಚಿಕೊಂಡಿ ರುತ್ತಾನೆ. ಅವನು ತಪ್ಪಿತಸ್ಥ. ಆದರೆ ಹೆಂಗಸಿನ ವಿಷಯ ಹಾಗಲ್ಲ. ಅವ ಳಾವ ತಪ್ಪು ಮಾಡಿದವಳೂ ಅಲ್ಲ. ಅವಳಿಗೆ ಯಾವ ಭಯವೂ ಇಲ್ಲ. ನೇರ ವಾಗಿ ಅವಳು ಪೋಲೀಸಿಗೆ ಹೋಗುತ್ತಾಳೆ. ಅಂದರೆ ಅವಳನ್ನು ಕೊಂದೇ ಹಾಕಬೇಕು"

ರಾಮಾನುಜಂ ಬೆಣ್ಣೆಯಲ್ಲಿ ಕೂದಲು ತೆಗೆದ ಹಾಗೆ ಹೇಳಿದ.

"ಏನು ಸಾಹೇಬರೇ ! ಹೆದರಿಕೊಳ್ಳುವವರಂತೆ ಮಾತನಾಡುತ್ತೀರಲ್ಲಾ"

"ನನಗೆ ಭಯ, ಸ್ವಾಮಿ. ನನ್ನನ್ನೇನು ಮುಠಾಳ ಎಂದಿದ್ದೀರೇನು ? ಕಷ್ಟ ಪಟ್ಟು ಕೆಲಸ ಮಾಡಿದವರಿಗೆ ಕೈ ತುಂಬಾ ಕೊಡಬೇಕು. ನಿಮಗೇನು ನಷ್ಟ. ನನಗೆ ಐವತ್ತು ಕೊಡುತ್ತೀರಿ. ಆ ನಾಯಿಡುವಿಗೆ ಮೂರು ಕೊಡು ತ್ತೀರಿ. ಸರಿಯಾಗಿ ಕೆಲಸವಾಗಬೇಕು ಎಂದರೆ ಸರಿಯಾಗಿ ಕಾಸು ಬಿಚ್ಚ ಬೇಕು"

"ಏನು ಹೀಗೆ ಮಾತನಾಡುತ್ತೀರಿ, ಸಾಹೇಬರೇ. ಇದುವರೆವಿಗೆ ನಮ ಗೆಷ್ಟು ಖರ್ಚಾಗಿದೆ ಎಂಬುದು ನಿಮಗೆ ಗೊತ್ತಿಲ್ಲವೇ ? ಆರ್ಮುಗಂಗೂ ಅವನ ತಂಗಿಗೂ ಕೊಟ್ಟುದು ಐವತ್ತಾಗಿದೆ. ಲೆಕ್ಕವಿಲ್ಲದ ಚಿಲ್ಲರೇ ಖರ್ಚು ಹತ್ತು ಸಾವಿರದಷ್ಟಾಗಿದೆ. ಇನ್ನೂ ಐವತ್ತಾದರೆ ನಮಗೇನು ಉಳಿಯುತ್ತದೆ ?"

"ಎಷ್ಟು ಉಳಿದರೆ ಅಷ್ಟೇ. ಇಂತಹ ಕೆಲಸ ಮಾಡುವವರು ಇಷ್ಟಾಗು ತ್ತದೆ, ಅಷ್ಟಾಗುತ್ತದೆ-ಎಂದು ಲೆಕ್ಕಾಚಾರ ಮಾಡುತ್ತಾ ಕುಳಿತುಕೊಂಡರೆ ಆಗುತ್ತದೆಯೇ ?"

ಇದುವರೆವಿಗೂ ಮಾತು ಕೇಳುತ್ತಾ ಕುಳಿತಿದ್ದ ಪಿಳ್ಳೇ ಅಂದ.

"ಮಾತಿಗೆ ಹೇಳುತ್ತೇನೆ, ನೀವು ಐವತ್ತು ಕೇಳುವುದು ಹೆಚ್ಚು. ಅವಳಿಗೇ ಐವತ್ತು ಕೊಟ್ಟು ಬಿಡಬಹುದಲ್ಲ. ಅದರಿಂದ ಐವತ್ತರಲ್ಲಿ ಕೆಲಸವೂ ಆಗು ತ್ತದೆ. ಮತ್ತೊಂದು ಕೊಲೆ ಮಾಡಿಸಿದೆವೆಂಬ ಅಪರಾಧವೂ ಇರುವುದಿಲ್ಲ"

ಸರ್ದಾರ್ ನಗುತ್ತಾ ಆ ಮಾತಿಗೆ ಉತ್ತರ ಹೇಳಿದ.

"ಬಹಳ ಚೆನ್ನಾಗಿ ಮಾತನಾಡುತ್ತೀರಿ. ನಾಳೇ ದಿನ ಅವಳಲ್ಲಿ ಹಣ ಕಂಡು ಪೋಲೀಸಿನವರಿಗೆ ಸಂಶಯ ಬಂದು ಅವಳನ್ನು ಹಿಡಿದರೂ

ಆಯಿತು. ಅಥವಾ ಅವಳೇ ಮತ್ತಷ್ಟು ಹಣದಾಸೆಯಿಂದ ಇನ್ನೂ ಐವತ್ತು ಕೊಡಬೇಕೆಂದು ಕೇಳಿದರೂ ಆಯಿತು"

ಪಿಳ್ಳೆ ಮತ್ತು ರಾಮಾನುಜಂ ಪರಸ್ಪರ ಮುಖಗಳನ್ನು ನೋಡಿಕೊಂಡರು.

ಸೇದುತ್ತಿದ್ದ ಬೀಡಿಯನ್ನು ಬೆಂಚಿನ ಮೇಲೆ ಉಜ್ಜಿ ಆರಿಸುತ್ತಾ ಸರ್ದಾರ್ ಹೇಳಿದ.

"ಅದರಲ್ಲಿ ಚೌಕಾಸಿಯೇ ಇಲ್ಲ, ಸ್ವಾಮಿ. ನಿಮಗೆ ಕೆಲಸವಾಗಬೇಕಾದರೆ ನಾನು ಹೇಳಿದಷ್ಟು ಕೊಟ್ಟುಬಿಡಿ. ಇಲ್ಲದಿದ್ದರೆ ನಿಮ್ಮ ಇಷ್ಟ"

"ಆಗಲಿ. ಮುಗಿಸಿಬಿಡಿ"

ಅನಾದ ಮೇಲೆ ಮೂರು ಮಂದಿಯೂ ಬಲುಹೊತ್ತು ಮಾತನಾಡುತ್ತಾ ಕುಳಿತುಕೊಂಡಿದ್ದರು.

## ೧೪

ಸಾಯಂಕಾಲ ರೆಕ್ಸ್ ಹೋಟಲಿನಲ್ಲಿ ರೂಂ ಕೇಳಿ ಗೊತ್ತು ಮಾಡಿಕೊಂಡನಂತರ ಸಿಮಲೆ ಅಲ್ಲಿ ಕುಳಿತಿದ್ದ ಮ್ಯಾನೇಜರನ್ನು ಕೇಳಿದಳು.

"ದಾಸಪ್ಪ ನಾಯಿಡುರವರು ಇಲ್ಲಿದ್ದಾರೇನು ?"

"ಸ್ವಲ್ಪ ತಡೆಯಿರಿ. ನೋಡಿ ಹೇಳುತ್ತೇನೆ"

ರಿಜಿಸ್ಟರು ತೆಗೆದು ನೋಡಿ ಅನಂತರ ಮ್ಯಾನೇಜರ್ ಹೇಳಿದ.

"ಎರಡು ದಿನಗಳ ಹಿಂದೆ ದಾಸಪ್ಪ ನಾಯಿಡು ಎಂಬುವವರು ಬಂದು ಇಳಿದುಕೊಂಡರು. ಅಂತೂ ಅವರು ಇನ್ನೂ ಬಿಟ್ಟು ಹೋಗಿಲ್ಲ. ರೂಮಿನಲ್ಲಿ ಇದ್ದಾರೆಯೋ ಇಲ್ಲವೋ ಗೊತ್ತಿಲ್ಲ"

"ಹಾಗಾದರೊಂದು ಕೆಲಸ ಮಾಡಿ. ನಾನು ಹೋಗಿ ರೂಮಿನಲ್ಲಿರುತ್ತೇನೆ. ನೀವು ಅವರು ಇದ್ದಾರೆಯೋ ಇಲ್ಲವೋ ವಿಚಾರಿಸಿ ಹೇಳಿ ಕಳುಹಿಸುತ್ತೀರಾ ?"

"ಅಗತ್ಯವಾಗಿ ಆಗಲೀಯಮ್ಮಾ"

ಸೇವಕನೊಬ್ಬನು ಹೋಲ್ಡಾಲ್ ಎತ್ತಿಕೊಂಡು ವಿಮಲೆಯನ್ನೂ ಕರೆದು ಕೊಂಡು ಹೋಗಿ ೧೮ನೇ ನಂಬರು ರೂಮಿನ ಬಾಗಿಲು ತೆಗೆದು ''ಇದೇ ತಮ್ಮ ಕೋಣೆ'' ಎಂದು ಹೇಳಿದ.

'ಸರಿ. ಒಂದು ಕಪ್ಪು ಟೀ ತೆಗೆದುಕೊಂಡು ಬರಲು ಹೇಳು''

ಅವನು ಹೊರಟು ಹೋದನಂತರ ವಿಮಲೆ ಬಾತ್‌ರೂಂಗೆ ಹೋಗಿ ಮುಖ ತೊಳೆದುಕೊಂಡಳು. ಬಿಚ್ಚಿ ಹಾಕಿದ್ದ ಹೋಲ್ಡಾಲಿಂದ ಒಂದು ಟವಲು ತೆಗೆದು ಮುಖ ಒರಸಿಕೊಂಡಳು. ಅನಂತರ ದಾಸಪ್ಪ ನಾಯಿಡುವಿನೊಂದಿಗೆ ಮಾತು ಹೇಗೆ ಆರಂಭಿಸುವುದೆಂದು ಆಲೋಚಿಸುತ್ತಾ ಕುಳಿತುಕೊಂಡಳು.

ವಿಮಲೆ ಇಲ್ಲಿ ಈ ರೀತಿಯಾಗಿ ಆಲೋಚನಾ ಮಗ್ನಳಾಗಿ ಕುಳಿತಿರುವಾಗ ಅಲ್ಲಿ ಮ್ಯಾನೇಜರು ದಾಸಪ್ಪ ನಾಯಿಡೂರವರ ರೂಮಿಗೆ ರಿಂಗ್ ಮಾಡಿ ಟೆಲಿಫೋನಿನಲ್ಲಿ ಹೇಳಿದ.

''ಈಗ ತಾನೇ ವಿಮಲಾದೇವಿ ಎಂಬುವವರು ಬಂದು ನಮ್ಮ ಹೋಟಲಿನಲ್ಲಿ ರೂಂ ತೆಗೆದುಕೊಂಡರು. ಅವರು ನಿಮ್ಮನ್ನು ವಿಚಾರಿಸಿದರು. ನೀವು ಅವರೊಂದಿಗೆ ಮಾತನಾಡಲು ಇಷ್ಟಪಡುವಿರಾದರೆ ನೀವಿರುವುದಾಗಿ ಅವರಿಗೆ ತಿಳಿಸುತ್ತೇನೆ''

''ಓಹೋ ! ಆಗಬಹುದು. ಯಾರಾದರೂ ನೋಡುವುದಾಗಿ ಹೇಳಿದರೆ ಯಾಕೆ ಮಾತನಾಡಬಾರದು ? ಅವರನ್ನು ಕನೆಕ್ಟ್ ಮಾಡಿ''

ನಾಯಿಡೂರವರೊಡನೆ ಮಾತನಾಡಿದನಂತರ ಮ್ಯಾನೇಜರು ರಿಂಗ್ ಮಾಡಿ ಕರೆದು ಹೇಳಿದ.

''ವಿಮಲಾ ದೇವಿಯವರೇ ! ನಾಯಿಡೂರವರು ತಮ್ಮ ಪಕ್ಕದ ರೂಮಿನಲ್ಲಿಯೇ ಇದ್ದಾರೆ. ಅವರೊಂದಿಗೆ ಫೋನಿನಲ್ಲಿ ಮಾತನಾಡಿರಿ''

ಟೀ ಕುಡಿಯುತ್ತಿದ್ದ ವಿಮಲೆ ಬಟ್ಟಲನ್ನು ಕೆಳಗಿಟ್ಟು ಫೋನಲ್ಲಿ ಮಾತನಾಡಿದಳು.

''ಹಲೋ ಯಾರು, ದಾಸಪ್ಪ ನಾಯಿಡೂರವರೇನು ಮಾತನಾಡುತ್ತಿರುವುದು ?''

''ಹೌದು. ಹೌದು. ಯಾರು ವಿಮಲೆಯೆ ? ಇಲ್ಲೇನು ಮಾಡುತ್ತಿ

ದ್ದೀಯೆ, ವಿಮಲಾ. ನನ್ನೊಂದಿಗೆ ಮಾತನಾಡಬೇಕಾಗಿದೆ ಎಂದು ಹೋಟಲು ಮ್ಯಾನೇಜರೊಂದಿಗೆ ಹೇಳಿದೆಯಂತೆ '

"ಹೌದು. ಬಹಳ ಜರೂರಾಗಿ ಮಾತನಾಡಬೇಕಾಗಿತ್ತು. ಎಲ್ಲಿ ಮಾತನಾಡೋಣ. ನಿಮ್ಮ ರೂಂ ಪಕ್ಕದಲ್ಲಿಯೇ ಇದೆಯಂತೆ. ದಯಮಾಡಿ ಸ್ವಲ್ಪ ಇಲ್ಲಿ ಬರುತ್ತೀರಾ ?"

"ಅದಕ್ಕೇನಂತೆ ? ಮಾತನಾಡೋಣ. ನನ್ನ ಕೋಣೆಗೇ ಬಾ. ಇಲ್ಲಿ ಯಾರೂ ಇಲ್ಲ. ಈ ವ್ಯವಹಾರ ನಡೆಯುವಾಗ ನನ್ನ ಹೆಂಡತಿಯೇಕಿರಬೇಕೆಂದು ಈ ದಿನ ಬೆಳಗಾಗ ಅವಳನ್ನು ತಿರುಪತಿಗೆ ಕಳುಹಿಸಿಬಿಟ್ಟೆ. ಇಲ್ಲಿಂಯೇ ಬಾ"

ವಿಮಲೆ ಕಾರ್ಯ ಸಾಧನೆಗಾಗಿ ಎಲ್ಲಿಗೆ ಬೇಕಾದರೂ ಹೋಗಲು ಸಿದ್ಧವಾಗಿದ್ದಳು. ನಾಯಿಡುವಿನ ಹೆಂಡತಿ ತಿರುಪತಿಗೆ ಹೋದದ್ದೇ ಚೆನ್ನಾಗಿತ್ತು. ಅವಳಲ್ಲಿರುವುದಕ್ಕಿಂತ ಇಲ್ಲದಿರುವಾಗಲೇ ಕಾರ್ಯಸಾಧನೆಗೆ ಅನುಕೂಲ. ಮದ್ಯಾಹ್ನ ವೈಯ್ಯಾಳೀ ಕಾವಲ್ ಕಂಪನಿಯಿಂದ ಹೋಗುವಾಗ ಓರೆಗಣ್ಣಿನಿಂದ ನೋಡಿದ್ದು ಅವಳಿಗೆ ಇನ್ನೂ ನೆನಪಿತ್ತು.

ಪಕ್ಕದ ಕೋಣೆಯನ್ನು ಪ್ರವೇಶ ಮಾಡಿದಾಗ ತನ್ನ ಆಲೋಚನೆ ಸರಿ ಎಂದು ಅವಳಿಗೆ ಮನದಟ್ಟಾಯಿತು. ನಾಯಿಡು ಸೋಫಾದ ಮೇಲೆ ಕುಳಿತುಕೊಂಡಿದ್ದ. ಮುಂದಿದ್ದ ಅಗಲವಾದ ಟೀಪಾಯಿಯ ಮೇಲೆ ವಿಸ್ಕೀ ಬಾಟಲು ಗ್ಲಾಸುಗಳಿದ್ದವು. ಕೈ ಬೆರಳುಗಳಲ್ಲಿ ಉರಿಯುತ್ತಿದ್ದ ಸಿಗರೇಟು ತಗುಲಿಹಾಕಿಕೊಂಡಿದ್ದಿತು.

ವಿಮಲೆಯನ್ನು ಕಂಡವನೇ ನಾಯಿಡು ಹೇಳಿದ.

"ಬಾ, ವಿಮಲಾ. ಒಳಗೆ ಬಾ. ಕುಳಿತುಕೋ. ಅಲ್ಲಿರುವ ಗ್ಲಾಸ್ ತೆಗೆದುಕೋ. ಏನು ವಿಷಯ ಹೇಳು. ನಿಮ್ಮ ಪಿಳ್ಳೆ ಹೇಗಿದ್ದಾನೆ ?"

ಕುಳಿತುಕೊಳ್ಳುತ್ತಾ ವಿಮಲೆ ಅಂದಳು.

"ಹೇಗಿರುತ್ತಾನೆ ? ಒಂದೇ ವಿಧವಾಗಿದ್ದಾನೆ. ನಾನು ಅವನ ಬಳಿ ಕೆಲಸ ಬಿಟ್ಟು ಬಿಟ್ಟೆ"

ವಿಮಲೆಯ ಗ್ಲಾಸಿಗೆ ವಿಸ್ಕೀ ಹಾಕಿ, ಸೋಡಾ ಸುರಿದು ನಾಯಿಡು ಹೇಳಿದ.

''ನಿನ್ನಂತಹವಳು ಅವನಂತಹವನ ಬಳಿ ಹೆಚ್ಚು ದಿನ ಇರಲಾಗುವುದಿಲ್ಲ. ಬೆಳಗಾಗ ನೋಡಿದಾಗಲೇ ನಾನದನ್ನು ಪತ್ತೆ ಮಾಡಿದೆ. ಅದಿರಲಿ. ಈಗೇನು ವಿಷಯ. ಏನೋ ಮಾತನಾಡಬೇಕೆಂದೆಯಲ್ಲಾ''

''ನೀವು ನನಗೇನಾದರೂ ಸಹಾಯ ಮಾಡುತ್ತೀರೇನೋ ಎಂದು ಬಂದೆ. ಅದಕ್ಕಾಗಿ ನಿಮಗೂ ಏನಾದರೂ ಕೊಡಬೇಕೆಂದರೂ ನಾನು ಸಿದ್ಧ ವಾಗಿದ್ದೇನೆ''

ನಾಯುಡು ನಕ್ಕು, ಮಾತನಾಡಿದ.

"ದುಡ್ಡಿನ ವಿಷಯ ನನಗಾವಾಗಲೂ ದೊಡ್ಡದಲ್ಲ, ವಿಮಲ. ಆದರ ಲ್ಲಿಯೂ ನಾನೀಗ ಚೆನ್ನಾಗಿ ದುಡ್ಡು ಮಾಡಿದ್ದೇನೆ. ನಾನು ಆ ಮೂರು ಸಾವಿರದ ವಿಷಯವನ್ನೂ ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ನನ್ನಂತಹವನು ಇನ್ನೊಬ್ಬರಿಂದ ಮೋಸ ಹೋದೆ ಎನ್ನಿಸಿಕೊಳ್ಳುವುದು ನನಗೆ ಬೇಡ. ಅದ ರಿಂದ ಆ ಹಣ ತೆಗೆದುಕೊಳ್ಳಲೇಬೇಕೆಂದು ನಿರ್ಧರಿಸಿದೆ. ಒಟ್ಟಿನಲ್ಲಿ ಆ ಪಿಳ್ಳೆ ಯನ್ನು ಕಂಡರೆ ನನಗೇಕೋ ಆಗುವುದಿಲ್ಲ. ಅವನೇನಾದರೂ ನಿನಗೆ ತೊಂದರೆ ಮಾಡಿದ್ದಾನೇನು, ಹೇಳು''

"ಆ ಪಿಳ್ಳೆ ನನಗೆ ಹಣ ಕೊಡಬೇಕು. ಸ್ವಲ್ಪ ಹೆಚ್ಚಾಗಿಯೇ ಕೊಡ ಬೇಕಾಗಿದೆ, ಎನ್ನಿ. ನಿಮಗೆ ಇಲ್ಲಿ ಹಣ ತೆಗೆದುಕೊಂಡು ಬರುತ್ತಾನೆಯಲ್ಲಾ ಆಗಲೇ ನನಗೂ ತೆಗೆದುಕೊಂಡು ಬರಬೇಕೆಂದು ಹೇಳಿದ್ದೇನೆ. ಅಷ್ಟರೊಳಗೆ ನನಗೇನೂ ಅಪಾಯವಾಗದಂತೆ ನೀವು ನೋಡಿಕೊಳ್ಳಬೇಕು"

''ಅದೇನು ಕಷ್ಟ ಸಾಧ್ಯವಲ್ಲ, ವಿಮಲ. ನೀನು ಇನ್ನು ನನ್ನೊಂದಿಗೆ ಇದ್ದುಬಿಡು. ರಾತ್ರಿ ನನ್ನೊಂದಿಗೇ ಊಟ ಮಾಡು. ಹತ್ತೂವರೆಯ ಹೊತ್ತಿಗೆ ಕೋಣೆಯ ಬಾಗಿಲು ಹಾಕಿಕೊಂಡು ಮಲಗಿಬಿಡು. ಯಾರು ಬಂದು ತಟ್ಟಿದರೂ ತೆಗೆಯಬೇಡ. ನಾಳೆ ಬೆಳಗಾಗ ಕಾಫೀ ತಿಂಡಿಯಾದ ನಂತರ ನಾನು ಮೈಸೂರಿಗೆ ಹೋಗಿ ಬರಬೇಕಾಗಿದೆ. ನನ್ನೊಂದಿಗೆ ಬಂದು ಬಿಡು. ಸಾಯಂಕಾಲ ಐದೂವರೆಯ ವೇಳೆಗೆ ವಾಪ್ಸು ಬರೋಣ. ಪಿಳ್ಳೇ ಆರು ಗಂಟೆಗೆ ಸರಿಯಾಗಿ ಹಣ ತೆಗೆದುಕೊಂಡು ಬರಬೇಕಾಗುತ್ತದೆ. ಇದು ಹೇಗಿದೆ''

''ಸರಿಯಾಗಿದೆ. ಆದರೆ ತಮ್ಮಲ್ಲಿ ಮತ್ತೊಂದು ಪ್ರಾರ್ಥನೆಯಿದೆ.

ನನ್ನಲ್ಲಿ ಒಂದು ಸೀಲು ಮಾಡಿದ ಕವರಿದೆ. ನನಗೇನಾದರೂ ಅಪಾಯವಾದರೆ ಇದನ್ನು ಸಂಪತ್‌ರವರಿಗೆ ತಲುಪಿಸಿಬಿಡಬೇಕು''

''ಸಂಪತ್‌ಗೆ ಯಾಕೆ, ವಿಮಲಾ. ಅಂತಹ ಜನಗಳು ನಮಗೆ ವಿಷಪ್ರಾಯರಲ್ಲವೇ ?''

"ನನಗೂ ಗೊತ್ತಿದೆ. ಆದರೆ ನನಗೇನಾದರೂ ಆದರೆ ನನ್ನನ್ನು ಯಾರಾದರೂ ಕೊಂದುಹಾಕಿದರೆ ಅದನ್ಯಾರು ಮಾಡಿದರೆಂಬುದನ್ನು ನಾನು ಸಂಪತ್‌ಗೆ ತಿಳಿಸಬೇಕು''

''ಅಂತಹ ಅವಶ್ಯಕತೆಯೇ ಇಲ್ಲ. ನಿನ್ನನ್ನು ಯಾರೂ ಕೊಲ್ಲದಂತೆ ನೋಡಿಕೊಳ್ಳುವುದು ನನ್ನ ಜವಾಬ್ದಾರಿ. ಆದರೂ ನೀನು ಆ ಕಾಗದ ನನ್ನ ಬಳಿ ಕೊಟ್ಟಿರಬೇಕೆಂದರೆ ಅಡ್ಡಿಯೇನಿಲ್ಲ. ಹುಷಾರಾಗಿ ತೆಗೆದಿಟ್ಟಿರುತ್ತೇನೆ. ನಿನ್ನ ಬಳಿ ಕಾಗದವಿದೆಯೇನು ?''

ಸೀಲು ಮಾಡಿದ ಕವರಿನಲ್ಲಿ ಕಾಗದವು ಸಿದ್ಧವಾಗಿದ್ದಿತು. ವ್ಯಾನಿಟೀ ಬ್ಯಾಗ್‌ನಲ್ಲಿದ್ದ ಕವರನ್ನು ತೆಗೆದುಕೊಟ್ಟಳು. ದಾಸಪ್ಪ ನಾಯಿಡು ಅದೇನೂ ಮುಖ್ಯವಲ್ಲವೆಂಬುವಂತೆ ಜೇಬಿನಲ್ಲಿಟ್ಟುಕೊಂಡ.

'' ಈ ಕಾಗದದ ವಿಷಯ ಏನೂ ಯೋಚಿಸಬೇಡ. ಅದು ಭದ್ರವಾಗಿರುತ್ತದೆ. ಇನ್ನೊಂದು ಸ್ವಲ್ಪ ಸ್ವಲ್ಪ ಹಾಕಿಕೊಂಡು ಹಾಗೇ ಓಡಿಯಾಡಿಕೊಂಡು ಬರೋಣ, ಏನಂತೀಯ ? ''

ಏನನ್ನುತ್ತಾಳೆ? ಅವನೇನು ಹೇಳಿದರೂ ಮಾಡುವುದಕ್ಕೆ ಅವಳು ಸಿದ್ಧವಾಗಿಯೇ ಇದ್ದಳು. ಹಾಗೆಯೇ ಅವರು ತಿರುಗಾಡಿಕೊಂಡು ಬರಲು ಹೋದರು. ಜೊತೆಯಲ್ಲಿ ಬರುತ್ತಿದ್ದವ ತನಗೆ ಮಾರುಹೋಗಿದ್ದಾನೆಂದು ; ಮಲೆಗೆತೋರಿತು. ಯಾವಾಗಲೂ ಅವಳಿಗೆ ಹಾಗೆಯೇ ಯಾವ ಗಂಡು ತಾನೇ ತನಗೆ ಮಾರು ಹೋಗುವುದಿಲ್ಲ ಎಂದು ಅವಳ ಭಾವನೆ.

ಹೋಟಲಿಗೆ ಪುನಃ ವಾಪಸ್ಸು ಬಂದರು. ಇಬ್ಬರೂ ಹೊರಗಡೆ ವರಾಂಡದಲ್ಲಿ ಕುಳಿತುಕೊಂಡಿದ್ದಾಗ ದಾಸಪ್ಪನಾಯುಡು ಪ್ರಶ್ನೆ ಮಾಡಿದ.

" ವಿಮಲಾ ! ನೀನೇನು ಊಟಮಾಡಬೇಕೆ ? "

ಉತ್ತರ ಹೇಳುವ ಮೊದಲು ಗಳಿಗೆಯ ಕಾಲ ಆಲೋಚನೆ ಮಾಡಿ ಹೇಳಿದಳು-

"ಅಷ್ಟು ಹಸಿವೇನಿಲ್ಲ. ಅದೇನು ಆರೀತಿಯಾಗಿ ಕೇಳುತ್ತೀರಿ?"

ನಗುತ್ತಾ ಆವನೆಂದ.

"ನೀನು ಊಟ ಮಾಡಬೇಕಾಗಿದ್ದರೆ ಮಾಡು. ನನ್ನದೇನೂ ಅಡ್ಡಿಯಿಲ್ಲ. ನೀನು ಊಟ ಮಾಡದಿದ್ದರೆ ಇಬ್ಬರೂ ಕುಳಿತು ಇನ್ನೊಂದೊಂದು ಬ್ರಾಂದಿ ತೆಗೆದುಕೊಳ್ಳೋಣವೆಂದು ಹೇಳಿದೆ."

"ಓಹೋ! ನನಗೂ ಅದೇ ಪ್ರಿಯ. ನಾನು ಊಟಮಾಡುವುದಿಲ್ಲ"

ಇಬ್ಬರೂ ಬ್ರಾಂದಿಯ ಗ್ಲಾಸುಗಳನ್ನು ಮುಂದಿಟ್ಟುಕೊಂಡು ಆಗಾಗ ಸ್ವಲ್ಪ ಸ್ವಲ್ಪ ತೆಗೆದು ರುಚಿ ನೋಡುತ್ತಾ ಕುಳಿತುಕೊಂಡಿದ್ದರು. ಆಗ ವಿಮಲೆ ಅಂದಳು.

"ನನ್ನ ಗೆಳತಿಯೊಬ್ಬಳು ಕುಳಿತಿದ್ದಾಳೆ. ನಿಮಗೆ ಆಕ್ಷೇಪಣೆ ಇಲ್ಲದಿದ್ದರೆ ಅರಗಳಿಗೆ ಮಾತನಾಡಿಕೊಂಡು ಬರುತ್ತೇನೆ"

"ಆಕ್ಷೇಪಣೆಯೇನು? ಹೋಗಿ ಮಾತನಾಡಿಕೊಂಡು ಬಾ"

ವಿಮಲೆ ಹೇಳಿದ್ದೇನು ಸುಳ್ಳಲ್ಲ. ಅವಳ ಗೆಳತಿ ನಾಲ್ಕು ಟೇಬಲ್‌ಗಳಾಚೆ ಒಬ್ಬಳೇ ಕುಳಿತುಕೊಂಡಿದ್ದಳು. ಸೌಜನ್ಯವಾಗಿ ನಾಲ್ಕು ಮಾತುಗಳನ್ನಾಡಿ ಕೊಂಡು ವಿಮಲೆ ವಾಪ್ಸು ಬಂದಳು.

ಅವಳು ವಾಪ್ಸುಬಂದನಂತರ ಹೆಚ್ಚುಹೊತ್ತು ದಾಸಪ್ಪನಾಯಿಡು ಅಲ್ಲಿ ಕುಳಿತಿರಲಿಲ್ಲ. ಆಗಲೆ ಹತ್ತು ಹತ್ತೂಕಾಲು ಗಂಟೆ ಆಗಿದಿತ್ತು.

"ಹೋಗಿ ಮಲಗಿಕೊಳ್ಳೋಣ, ಏಳು"

ಮಹಡಿಯ ಮೇಲೆ ಕೋಣೆಗಳ ಬಳಿ ಬಂದಾಗ ನಾಯಿಡು "ನೀವು ಹೋಗಿ ಮಲಗಿಕೊಳ್ಳಿ" ಎಂದು ಹೇಳಿದಾಗ ವಿಮಲೆಗೆ ಆಶ್ಚರ್ಯವಾಯಿತು. ಇವನೇಕೆ ಹಾಗೆಯೇ ಹೊರಟುಹೋದ ಎಂದುಕೊಂಡಳು,

ನಾಯುಡು ತನ್ನ ಕೋಣೆಗೆ ಹೋದ. ಹೋದವನೇ ಬಾಗಿಲು ಹಾಕಿ ಕೊಂಡು ಜೇಬಿನಲ್ಲಿದ್ದ ಕಾಗದವನ್ನು ಒಡೆದು ವಿಮಲೆ ಸಂಪತ್‌ಗೆ ಏನು ಬರೆದಿದ್ದಾಳೆಂಬುದನ್ನು ಓದಿಕೊಂಡು ನಕ್ಕು, ಅದನ್ನು ಪುನಃ ಜೋಬಿನಲ್ಲಿಟ್ಟು ಕೊಂಡು ಪಕ್ಕದ ಕೋಣೆಗೆ ಹೋದ.

ವಿಮಲೆಗೆ ಕಣ್ಣು ಎಳೆಯುತ್ತಿತ್ತು. ಆದರೂ ಪ್ರಯತ್ನ ಪುರಸ್ಕರವಾಗಿ ಎದ್ದು ಕುಳಿತಿದ್ದಳು. ನಾಯುಡುವಂತೂ ತನ್ನ ಕೋಣೆಗೆ ಬರಲಿಲ್ಲ. ತಾನಾಗಿಯೇ ಅಲ್ಲಿಗೆ ಹೋಗೋಣವೇ ಎಂದು ಆಲೋಚನೆ ಮಾಡುತ್ತಿದ್ದಳು.

ನಾಯುಡು ಕೋಣೆಗೆ ಬಂದಾಗ ಅವಳಿಗೆ ಆನಂದವಾಯಿತು.. ಗೆದ್ದೆ ನೆಂದುಕೊಂಡಳು.

ಒಳಗೆ ಬಂದವನು ವಿಮಲೆಯ ನಿರೀಕ್ಷೆಯಂತೆ ಅವಳನ್ನು ಸಹಾ ನೋಡ ಲಿಲ್ಲ. ನಿಂತುಕೊಂಡೇ ಹೇಳಿದ.

" ವಿಮಲಾ. ನೀನು ಈ ರಾತ್ರಿ ನನ್ನ ಕೋಣೆಯಲ್ಲಿ ಮಲಗಿಕೊಳ ಬೇಕು ನಾನು ನಿನ್ನ ಕೋಣೆಯಲ್ಲಿ ಮಲಗಿಕೊಳ್ಳುತ್ತೇನೆ. "

ವಿಸ್ಮಯದಿಂದ ಕಣ್ಣರಳಿಸಿ ನೋಡುತ್ತಾ ಕೇಳಿದಳು.

" ಯಾಕೆ ಏನು ಸಮಾಚಾರ? "

" ಅಂತಹದೇನೂ ಇಲ್ಲ. ಇಲ್ಲಿ ಸ್ವಲ್ಪ ಹುಷಾರಾಗಿರೋಣವೆಂದು ಅಷ್ಟೇ. ಯಾರಾದರೂ ನಿನ್ನನ್ನು ಏನಾದರೂ ಮಾಡಬೇಕೆಂದು ಬಂದರೆ ನಿನಗೆ ಬದ ಲಾಗಿ ನಾನು ಇದ್ದರೆ ಸರಿಹೋಗುತ್ತದೆ. ಆದರೆ ಕಿಟಕಿ ಬಾಗಿಲುಗಳನ್ನು ಚೆನ್ನಾಗಿ ಹಾಕಿ ಮಲಗಿಕೊಳ್ಳಲು ಮರೆಯಬೇಡ. "

ಅದು ವಿಮಲೆಗೆ ಒಪ್ಪಿತವಾಗಿಯೇ ಇದ್ದಿತು. ಆದರೂ ಸಹ ಯಾಕೋ ನಾಯುಡೂ ಮುಂದುವರಿಯುವಂತೆ ಕಂಡುಬರಲಿಲ್ಲ. ಅವನಿಗೇನು ಇಷ್ಟ ವಿಲ್ಲವೋ? ತನ್ನನ್ನು ಪ್ರೀತಿಸುವುದಿಲ್ಲವೋ? ಇನ್ನೊಂದು ದಾರಿಯ ಸಮಯ ವಾ ಗಿದ್ದರೆ ಅವಳೇ ಪ್ರಯತ್ನಮಾಡಿ ನೋಡುತ್ತಿದ್ದಳು. ಆದರೆ ವಿಪರೀತ ನಿದ್ದೆ ಬರುತ್ತಿದೆ. ಕಣ್ಣುಗಳು ಸೆಳೆದುಕೊಂಡು ಬರುತ್ತಿವೆ. ಅಲ್ಲಿಂದ ಮರುಮಾತ ನ್ನಾಡದೇ ಎದ್ದು ಪಕ್ಕದಲ್ಲಿದ್ದ ದಾಸಪ್ಪನಾಯುಡುವಿನ ಕೋಣೆಗೆ ಹೊರಟು ಹೋದಳು.

ಅರ್ಧ ರಾತ್ರಿಯಾದನಂತರ ಒಂದು ಹೊತ್ತಿನಲ್ಲಿ ಅವಕುಂಠನವತಿಯಾದ ವೃದ್ಧ ಸ್ತ್ರೀಯೊಬ್ಬಳು ಬಂದು ರೆಕ್ಸ್ ಹೋಟಲಿನ ೧೫ನೇ ನಂಬರು ಕೋಣೆಯ ಮುಂದೆ ನಿಂತು ಶಬ್ದ ಮಾಡದೇ ಬಾಗಿಲು ಹಾಕಿದೆಯೋ ಇಲ್ಲವೋ ಎಂದು ತಳ್ಳಿ ನೋಡಿದಳು. ಅವಳ ನಿರೀಕ್ಷೆಯಂತೆಯೇ ಬಾಗಿಲು ಹಾಕಿತ್ತು. ಕೋಣೆಯ ಬೀಗದ ಕೈಯೇನೋ ಆ ಸ್ತ್ರೀವ್ಯಕ್ತಿಯ ಬಳಿಯೇ ಇದ್ದಿತು. ಆದರೆ, ಒಳಗಿನಿಂದ ಚಿಲಕ ಹಾಕಿಕೊಂಡಿದ್ದರೆ? ಬೀಗ ಹಾಕಿದಾರೆ ಚಿಲುಕ ಹಾಕಿರುವು

ದಿಲ್ಲ. ಚಿಲುಕ ಹಾಕಿದ್ದರೆ ಬೀಗ ಹಾಕಿಕೊಂಡಿರುವುದಿಲ್ಲ–ಎಂದುಕೊಂಡಿತು. ಬೀಗದ ಕೈಯ್ಯೊಂದನ್ನು ಹಾಕಿ ಮೆಲ್ಲನೆ ತಿರುಗಿಸಿತು. ಬೀಗ ಹಾಕಿತ್ತು. ಚಿಲಕ ಹಾಕಿರಲಿಲ್ಲ. ವೃದ್ಧ ಸ್ತ್ರೀ ಒಳಗೆ ಹೋಗಿ ಬಾಗಿಲು ಮುಚ್ಚಿ ಚಿಲಕ ಹಾಕಿತು.

ಮಂಚ ಎಲ್ಲಿರಬೇಕು. ತನ್ನ ಕೋಣೆಯಂತೆಯೇ ಎದುರುಗಡೆಯೇ ಇರಬೇಕು. ರೆಕ್ಸ್ ಹೋಟಲಿನ ಕೋಣೆಗಳೆಲ್ಲವೂ ಹೆಚ್ಚೂ ಕಡಿಮೆಯಾಗಿ ಒಂದೇ ವಿಧವಾಗಿರುತ್ತವೆ.

ನಿರೀಕ್ಷಿಸಿದಂತೆ ಎದುರಿಗೆ ಮಂಚವಿತ್ತು. ಮಂಚದ ಮೇಲೆ ಹಾಸಿಗೆ ಯಿತ್ತು. ಬರಿಯ ಹಾಸಿಗೆ. ಹಾಸಿದ್ದು ಹಾಸಿದಂತೆಯೇ ಇತ್ತು–ಹಾಗಾ ದರೆ ತಾನು ಬಂದ ಕೆಲಸ ನಿರರ್ಥಕವಾಯಿತೇನು ?

ವೃದ್ಧಳಾದ ಸ್ತ್ರೀ ವ್ಯಕ್ತಿಯು ಏನು ಮಾಡುವುದಕ್ಕೂ ತೋರದೇ ಪುನಃ ಬಾಗಿಲ ಕಡೆಗೆ ತಿರುಗಿ ನೋಡಿತು. ಕೆಂಪುಗಣ್ಣಿನ ಭೂತಾಕೃತಿಯೊಂದು ಎದುರಿಗೆ ಸ್ವಲ್ಪ ದೂರದಲ್ಲಿ ನಿಂತಿದೆ. ಅವೇನು ಕೆಂಪು ದೀಪಗಳೋ ಅಥವಾ ಕಣ್ಣುಗಳೋ ಹೇಳುವುದು ಕಷ್ಟ. ಅಂತೂ ನಕ್ಷತ್ರಗಳಂತೆ ಪ್ರಕಾಶಿಸುತ್ತಿವೆ. ಆ ಕಣ್ಣುಗಳ ಪ್ರಕಾಶದಲ್ಲಿ ಮುಖವೂ ಸ್ವಲ್ಪ ಸ್ವಲ್ಪ ಕಂಡುಬರುತ್ತಿದೆ. ಆ ಮುಖವು ಭೂತಾಕೃತಿಯೇ. ವಿಕಾರವಾದ ಮುಖ. ಕೋರೆದಾಡೆಗಳು.

ಕತ್ತಲಲ್ಲಿ ಕೋಣೆಯನ್ನು ಪ್ರವೇಶಿಸಿದ್ದ ಸ್ತ್ರೀ ವ್ಯಕ್ತಿಗೆ ಜಂಘಾಬಲವೇ ಉಡುಗಿ ಹೋಯಿತು. ಭಯದಿಂದ ರೋಮರಾಜಿಯು ಸಿಮಿರಿ ನಿಂತು ಕೊಂಡಿದ್ದಿತು.

ಪರಿಸ್ಥಿತಿ ಏನೆಂದು ಅರ್ಥ ಮಾಡಿಕೊಳ್ಳುವುದರಲ್ಲಿ ಇನ್ನೆರಡು ಅಂತಹ ಕೆಂಗಣ್ಣಿನ ಭೂತಗಳು ಆ ಕೋಣೆಯಲ್ಲಿರುವುದು ಕಂಡುಬಂದಿತು. ಒಟ್ಟು ಮೂರು. ಮೂರು ಭೂತಾಕೃತಿಗಳೂ ಸ್ತ್ರೀ ವ್ಯಕ್ತಿಯನ್ನು ಸಮೀಪಿಸಿದವು. ಆ ವ್ಯಕ್ತಿಯು ವೃದ್ಧ ಸ್ತ್ರೀಯಾಗಿದ್ದರೂ ಅಬಲೆಯಾಗಿರಲಿಲ್ಲ. ಸಬಲೆಯಾ ಗಿಯೇ ಇದ್ದಳು. ತನ್ನನ್ನು ಎದುರಿಸಲು ಬಂದ ಭೂತಗಳನ್ನು ಪ್ರತಿರೋ ಧಿಸಲು ಪ್ರಯತ್ನ ಮಾಡಿದಳು. ಆದರದು ಸಾರ್ಥಕವಾಗಲಿಲ್ಲ. ಎದುರಿ ಸಿದ ಭೂತಾಕೃತಿಗಳೂ ಬಲವಾಗಿಯೇ ಇದ್ದವು.

ಎರಡು ಗಳಿಗೆಗಳೊಳಗಾಗಿ ಸ್ತ್ರೀ ಕೆಳಗೆ ಬಿದ್ದಿತ್ತು. ಭೂತವೊಂದು ಕತ್ತಲಲ್ಲಿ ಆ ವ್ಯಕ್ತಿಯ ಕೊರಳು ಹಿಡಿದು ಹಿಸುಕುತಿತ್ತು.

## ೧೫

"ಬೆಳಕು ಹರಿಯುವ ಮೊದಲೇ ಏನು ಪ್ರಾಣ ತೆಗೆಯುತ್ತೀರಪ್ಪಾ. ಅಮ್ಮಾವರೇ ಕಾಫಿಯನ್ನಾದರೂ ಕೊಡುತ್ತೀರೋ ಇಲ್ಲವೋ ?"

ಇಬ್ರಾಹಿಂ ಸಾಹೇಬರು ಸಂಪತ್‌ನ ಹಾಸಿಗೆಯನ್ನು ಸಮೀಪಿಸುತ್ತಿದ್ದಾಗ ಕಾಫಿಯನ್ನು ತರಲು ಸೀತಮ್ಮ ಒಳಗೆ ಹೋದರು. ಸಾಹೇಬರು ಸಂಪತ್‌ನನ್ನು ಎಬ್ಬಿಸಿದರು. ಅವನು ಕಣ್ಣುಜ್ಜಿಕೊಂಡು ಎದುರಿಗೆ ಕುಳಿತಿದ್ದ ಸಾಹೇಬರನ್ನು ನೋಡಿ, "ಬಂದಿರಾ ? ಒಳ್ಳೆಯದಾಯಿತು" ಎಂದ್ಹೇಳಿ, ತಲೆಯ ಕೆಳಗಿದ್ದ ಪ್ಯಾಕ್ ಬೆಂಕೀ ಪಟ್ಟಣಗಳನ್ನು ತೆಗೆದು ಸಿಗರೇಟ್ ಹಚ್ಚಿಕೊಂಡ.

ಅಷ್ಟು ಹೊತ್ತಿಗೆ ಸೀತಮ್ಮ ಒಂದು ಸಣ್ಣ ಕೂಜಾದಲ್ಲಿ ಬಿಸಿಬಿಸಿಯಾದ ಸ್ಟ್ರಾಂಗ್ ಕಾಫಿಯನ್ನೂ ಎರಡು ಗ್ಲಾಸುಗಳನ್ನೂ ತಂದಿಟ್ಟರು.

"ಏನ್ರಪ್ಪಾ, ಅಷ್ಟು ಅವಸರದಿಂದ ಕರೆದಿರಿ. ನಾನು ಇಲ್ಲಿ ಇಲ್ಲವೇ ಇಲ್ಲ ಎನ್ನುವ ಹಾಗೆ ನಿಮ್ಮಷ್ಟಕ್ಕೆ ನೀವು ಹಾಯಾಗಿದ್ದೀರಲ್ಲಾ"

"ಸ್ವಲ್ಪ ತಡೆಯಿರಿ, ಸಾಹೇಬರೇ ! ಮೊದಲು ಕಾಫೀ ಕುಡಿದು ಅನಂತರ ಮಾತು ಕಥೆಗಳನ್ನು ಆಡಿಕೊಳ್ಳೋಣ"

"ಅಂದರೆ ವಿಷಯ ಅಷ್ಟೇನೂ ಅರ್ಜೆಂಟ್ ಅಲ್ಲವೆನ್ನುತ್ತೀರೇನು ? ನಾನೂ ನಿದಾನವಾಗಿ ನಾಷ್ಟಾ ಗೀಷ್ಟಾಮಾಡಿಕೊಂಡು ಬರಬಹುದಾಗಿತ್ತು"

"ಅಯ್ಯೋ ! ಉಂಟೇ-ಎಂತಹ ಮಾತು ? ನಾನೇನು ಬಿಡುವಾಗಿದ್ದೇನೆ ಎಂದು ಕೊಂಡಿದ್ದೀರೇನು ?"

ಕಾಫಿಯನ್ನು ಕುಡಿದು ಗಡ್ಡವನ್ನು ನೀವಿಕೊಳ್ಳುತ್ತಾ ಸಾಹೇಬರು ಹೇಳಿದರು.

"ಹಾವಿಯುವರು ಏನೋ ಕೇಪ್ರು ಹೊಡೆದಂತಿದೆ. ಅದಕ್ಕೇ ಬಹಳ ಖುಷಿಯಾಗಿದ್ದೀರಿ. ನಮಗೆ ಅರ್ಥವಾಗಬಾರದೆಂದು ಒಗಟುಗಳಿಂದ ಮಾತನಾಡುತ್ತಿದ್ದೀರಿ"

"ನಾವೇನು ಮಾಡಿದರೇನು, ಸಾಹೇಬರೇ! ನಿಮ್ಮನ್ನು ಬಿಟ್ಟು ಮಾಡ ಲಾಗುವುದೇ? ಈ ಕಾಗದ ಸ್ವಲ್ಪ ಓದಿನೋಡಿ"

ಸಂಪತ್ ಜೇಬಿನಿಂದ ಒಂದು ಕಾಗದವನ್ನು ತೆಗೆದುಕೊಟ್ಟ-ಸಾಹೇ ಬರು ಓದಿದರು. ಆ ಕಾಗದದಲ್ಲಿ ಈ ರೀತಿಯಾಗಿ ಬರೆದಿತ್ತು.

"ಪತ್ತೇದಾರರಾದ ಸಂಪತ್‌ರವರಿಗೆ........"

"ಈ ಕಾಗದ ನಿಮಗೆ ತಲಪುವ ವೇಳೆಗೆ ನಾನು ಕೊಲೆಯಾಗಿರುತ್ತೇನೆ. ನನ್ನನ್ನು ಕೊಲೆ ಮಾಡಿದವನು ಅಥವಾ ಮಾಡಿಸಿದವನು ಗಣೇಶ ಪಿಳ್ಳೆ. ಅವನ ಪರ್ಸನಲ್ ಅಸಿಸ್ಟೆಂಟ್ ರಂಗನಾಯಕಿಯು ಹೈದರಾ ಬಾದಿಗೆ ಓಡಿಯೋಗಿದ್ದಾಳೆ. ವೈಯ್ಯಾಳೀ ಕಾವಲ್ ಕಂಪನಿಯ ಹಣವೆಲ್ಲವೂ ಏನಾಯಿತೆಂಬುದು ಅವರಿಬ್ಬರಿಗೆ ಮಾತ್ರ ಗೊತ್ತಿದೆ.

ವಿಮಲಾ"

"ನೋಡಿದಿರಾ ಸಾಹೇಬರೇ! ವಿಷಯ ಹೇಗಿದೆ?"

ವಿಸ್ಮಿತರಾದ ಸಾಹೇಬರು ಪ್ರಶ್ನೆ ಮಾಡಿದರು.

"ಈ ಕಾಗದದ ಬಲದಿಂದಲೇ ಯಾರ ಮೇಲೆಯಾಗಲೀ ಕೊಲೇ ಅಥವಾ ಚಪಾವಣೆಯನ್ನು ಸಾಬೀತು ಮಾಡುವುದು ಕಷ್ಟ. ಆದರೂ ಸಹ ಈ ಕಾಗದವು ತಮಗೆ ಸಿಕ್ಕಿದ್ದು ಹೇಗೆ? ಒಂದು ಕೊಲೆಯನ್ನೇ ಪತ್ತೇ ಮಾಡಲಾರದೇ ಪರದಾಡುತ್ತಿರುವಾಗ ಮತ್ತೊಂದು ಕೊಲೆಯ ವಿಷಯ ಹೇಳುತ್ತಿದ್ದೀರಿ. ಅವಳ ಹೆಣ ಎಲ್ಲಿದೆ? ಸ್ವಲ್ಪ ಹೇಳಿ, ಸ್ವಾಮಿ. ಒಳ್ಳೆಯ ತಾಪತ್ರಯ ಬಂತು"

"ಸ್ವಲ್ಪ ಸಮಾಧಾನವಾಗಿ ಕುಳಿತುಕೊಂಡು ಕೇಳಿ ಸಾಹೇಬರೇ. ವಿಮಲೆ ಕೊಲೆಯಾಗಿಲ್ಲ. ಜೀವಂತಳಾಗಿದ್ದಾಳೆ"

"ಹಾಗಾದರೆ ನೀವು ಈಗ ಕೊಟ್ಟ ಕಾಗದ ಸುಳ್ಳೇ?"

"ಕಾಗದವೂ ನಿಜ. ಅವಳು ಕೊಲೆ ಆಗದಿರುವುದೂ ನಿಜ. ಸಾವ ಧಾನವಾಗಿ ನಾನು ಹೇಳುವುದನ್ನು ಕೇಳಿರಿ. ವೈಯ್ಯಾಳೀ ಕಾವಲ್ ಕಂಪೆ

ನಿಗೆ ಮನೆಗಳು ಬೇಕೆಂದು ಅಡ್ವಾನ್ಸ್ ಕೊಟ್ಟವರುಗಳ ಹೆಸರು ವಿಲಾಸಗಳೆಲ್ಲವನ್ನೂ ನೋಡುತ್ತಾ ಬಂದೆ ಅದರಲ್ಲಿ ದಾಸಪ್ಪ ನಾಯಿಡು ಎಂಬುವವನೊಬ್ಬ. ಅವನೆಲ್ಲಿಯೋ ರಾಬರ್ಟ್ಸನ್‌ಪೇಟೆಯವನು. ಸಾಧಾರಣವಾಗಿ ಗಣೇಶ ಪಿಳ್ಳೆ ದಾಸಪ್ಪ ನಾ ಯಿ ಡು ವ ನ್ನು ನೋಡಿರಲಾರ ಎಂದುಕೊಂಡೆ ದೈವವಶಾತ್ ನಾನು ಅಂದುಕೊಂಡಂತೆಯೇ ಆಯಿತು....

"ನಮ್ಮ ಕಣ್ಣಪ್ಪ ಇಲ್ಲವೇ ? . ......"

ನಡುವೆ ಬಾಯಿ ಹಾಕಿ ಸಾಹೇಬರು ಕೇಳಿದರು.

"ಕಣ್ಣಪ್ಪನೆಲ್ಲಿ ಬಂದನಪ್ಪ, ಇದರಲ್ಲಿ. ಎರಡು ವರ್ಷಗಳಿಂದ ಅವನ ಗಲಾಟೆಯೇ ಇಲ್ಲವಲ್ಲ"

"ಹೇಳುವುದನ್ನು ಪೂರಾ ಕೇಳಿ. ಕಣ್ಣಪ್ಪ ಈ ವ್ಯವಹಾರಕ್ಕೆ ತಲೆಯಿಡಲಿಲ್ಲ. ನಾನು ದಾಸಪ್ಪ ಉರುಫ್ ಕಣ್ಣಪ್ಪ ಎಂದು ಹೇಳಿಕೊಂಡು ವೈಯ್ಯಾಳೀ ಕಾವಲ್ ಕಂಪೆನಿಗೆ ಹೋದೆ. ಅಲ್ಲಿ ವಿಮಲೆ ಕುಳಿತಿದ್ದಳು. ಅವಳು ಷಂಷೀರ್‌ಖಾನನ ಬೊಂಬಾಯಿ ಷೋದಲ್ಲಿ ಕೆಲಸ ಮಾಡುತ್ತಿದ್ದಳೆಂದು ಆಮ್ಮುಗಂ ಹೇಳಿದನಲ್ಲ. ಆ ಬೊಂಬಾಯಿ ಷೋ ನಲ್ಲಿ ನೋಡಿದ್ದವನ ಹಾಗೆ ವಿಮಲೆಯನ್ನು ಮಾತನಾಡಿಸಿದೆ. ನಿನ್ನೆಯ ದಿನ ಬೆಳಿಗ್ಗೆ ಎಲ್ಲಾ ಕತೆಯನ್ನೂ ಹೇಳಿದ್ದೇನಲ್ಲಾ. ಆಮ್ಮುಗಂನನ್ನು ಹೊಡೆದವನು ಬಾಷಾ ಎಂದು ಹೇಳಿದೆ"

"ಅದು ಸರಿ. ನೀವು ಬಾಷಾನನ್ನು ಪಾಪುಲರ್ ಬಳಿ ನೋಡಿದ್ದು ನಿಜ. ಆದರೂ ಅದು ಹೇಗೆ ಧೈರ್ಯವಾಗಿ ಆಮ್ಮುಗಂನನ್ನು ಬಾಷಾವೇ ಹೊಡೆದದ್ದು ಎಂದು ಹೇಳಿದಿರಿ ?"

"ಆ ರೌಡಿ ಅಲ್ಲಿಗೆ ಬರಬೇಕಾದರೆ ಇನ್ನೇನು ಕಾರಣವಿರಬೇಕು, ಹೇಳಿ. ನಾನು ಹೇಳಿದಂತೆ ನಿನ್ನೆಯ ಬೆಳಿಗ್ಗೆ ನೀವು ಬಾಷಾನನ್ನು ದಸ್ತಗಿರಿ ಮಾಡಿದ್ದರೆ ಅವನೇ ಬಾಯಿ ಬಿಡುತ್ತಿದ್ದ"

"ನೀವು ಹೇಳಿದಂತೆಲ್ಲಾ ಮಾಡಿದರೆ ಇರುವ ಕೆಲಸವೂ ಹೋಗುತ್ತದೆ, ಹೋಗಲಿ. ಆಮೇಲೇನಾಯಿತು ಹೇಳಿ"

"ಮುಂದಿನ ವಿಷಯ ಕೇಳಿ ನನ್ನ ಮೂರು ಸಾವಿರ ನೀವು ನುಂಗಿ ಹಾಕಿದ್ದೀರಿ. ನನ್ನ ದುಡ್ಡು ನನಗೆ ಕೊಟ್ಟುಬಿಡಿ. ಇಲ್ಲದಿದ್ದರೆ ನಿಮಗೆ

ತಲೇನೋವು ಬರುತ್ತದೆ ಎಂದು ಹೇಳಿದೆ. ಅವನು ಹೆದರಿದ. ನನಗೆ ತೋರು ವಂತೆ ಬಹುಶಃ ಈ ದಿನ ಸಾಯಂಕಾಲ ಆರು ಗಂಟೆಯ ವೇಳೆಗೆ ಮೂರು ಸಾವಿರ ರೂಪಾಯಿ ರೆಕ್ಸ್ ಹೋಟಲಿಗೆ ತಂದು ಕೊಡುತ್ತಾನೆ"

"ಸಾಹವ್ವಾ! ಒಳ್ಳೇ ಉಪಾಯ ಮಾಡಿದಿರಿ, ಸ್ವಾಮಿ. ಅವನು ತಂದುಕೊಟ್ಟರೆ ತಪ್ಪು ಒಪ್ಪಿಕೊಂಡಂತೆಯೇ ಆಯಿತು. ಈ ವಿಮಲಮ್ಮ ನದು ಏನೋ ಹೇಳುತ್ತಿದ್ದಿರಲ್ಲಾ-ಅದೇನು ?''

ವಿಮಲೆ ರೆಕ್ಸ್ ಹೋಟಲಿಗೆ ಬಂದು ತನ್ನ ಆಶ್ರಯವನ್ನು ಕೇಳಿದ ವಿವರಗಳೆಲ್ಲವನ್ನೂ ಹೇಳಿ ಮುಂದುವರಿದು ಸಂಪತ್ ಹೇಳಿದ.

"ರಾತ್ರಿ ಸುಮಾರು ಹತ್ತು ಗಂಟೆಯ ಹೊತ್ತಿನಲ್ಲಿ ಅವಳು ತನ್ನ ಗೆಳತಿ ಯೊಬ್ಬಳನ್ನು ನೋಡಲು ಹೋದಳು ಆಗ ಅವಳು ಕುಡಿಯುತ್ತಿದ್ದ ಬ್ರಾಂ ದಿಗೆ ಕ್ಲೋರಲ್ ಹೈಡ್ರೇಟ್ ಬೆರೆಸಿ ಅವಳನ್ನು ನನ್ನ ರೂಂನಲ್ಲಿ ಮಲಗಿಸಿ ನಾನು ಅವಳ ರೂಂನಲ್ಲಿ ಮಲಗಿಕೊಂಡೆ."

"ಬ್ರಾಂದಿಗೆ ಔಷಧಿ ಬೆರೆಸಿದ್ದು ತರ್ಕ್ಸೀರ್ ಆಯಿತಲ್ಲ, ಸ್ವಾಮಿ."

"ಅಷ್ಟೇ ಅಲ್ಲ. ಇನ್ನೂ ಎಷ್ಟೋ ತರ್ಕ್ಸೀರುಗಳಾದವು. ಕೇಳಿ ಅವ ಳಿಗೆ ಚೆನ್ನಾಗಿ ನಿದ್ರೆ ಬರಲೆಂದೇ ಕ್ಲೋರೆಲ್ ಬೆರೆಸಿದ್ದು. ಅಷ್ಟಕ್ಕೇ ನಾನು ನಿಶ್ಚಿಂತನಾಗಲಿಲ್ಲ. ಇಬ್ಬರು ಬಲವಾದ ಆಳುಗಳನ್ನು ಅವಳು ಮಲಗಿದ್ದ ಕಡೆ ಕಾವಲಿಗಿಟ್ಟಿದ್ದೆ."

ಸಾಹೇಬರು ನಗುತ್ತಾ ಪ್ರಶ್ನೆ ಮಾಡಿದರು.

"ಹುಡುಗಿ ಇಲ್ಲದೇ ಹುಡುಗಿಯ ಕೋಣೆಯಲ್ಲಿ ನೀವು ಮಲಗಿದ್ದಿರೋ?"

"ಅವಸರ ಪಡಬೇಡಿ. ಸ್ವಲ್ಪ ತಡೆಯಿರಿ. ಆಮೇಲೆ ಅಲ್ಲಿಗೆ ಒಬ್ಬ ಹುಡುಗಿ ಬಂದಳು.''

''ಅಚ್ಛಾ. ಅಚ್ಛಾ. ಸ್ವಾರಸ್ಯವಾಗಿದೆ. ಹೇಳಿ."

''ಸುಮಾರು ಎರಡು ಎರಡೂವರೆ ಗಂಟೆ ರಾತ್ರಿಯಲ್ಲಿ ಒಬ್ಬ ಹೆಂಗಸು ಅಲ್ಲಿಗೆ ಬಂದಳು. ಅವಳು ಹೆಂಗಸಲ್ಲ. ಸ್ತ್ರೀ ವೇಷಧಾರಿಯಾದ ಪುರುಷ. ಅವನು ಬಂದಿದ್ದುದು ವಿಮಲೆಯನ್ನು ಕೊಲೆಮಾಡುವುದಕ್ಕೆ. ನಮ್ಮ ಸುಂದರ ಕಥಕಳಿ ಡ್ಯಾನ್ಸ್ ಕಲಿಯಲು ಭೂತಾಕೃತಿಯ ಮುಖವಾಡಗಳನ್ನು ಮಾಡಿ ಸಿದ್ದ. ಕಣ್ಣುಗಳ ಬಳಿ ಕೆಂಪು ದೀಪಗಳಿದ್ದವು. ಅವನ್ನು ಧರಿಸಿ ನಾವು

ಮೂವರೂ ಅವಳ ರೂಮಿನಲ್ಲಿ ಕಾದಿದ್ದೆವು. ವೇಷಧಾರಿಯಾದ ವ್ಯಕ್ತಿಯು ಹೆದರಿಕೆಯಿಂದಲೇ ಕೆಳಗೆ ಬಿದ್ದು ಹೋಯಿತು. ಅದರ ಕತ್ತು ಹಿಸುಕಿದಂತೆ ಮಾಡಿದೆವು. ಅನಂತರ ಸ್ಕೋಪೋಲಾಮೈನ್ ಇಂಜೆಕ್ಷನ್ ಕೊಟ್ಟೆ."

''ಅದೇನು ಸ್ವಾಮಿ, ಹೊಸದಾಗಿ ಹೇಳುತ್ತಿದ್ದೀರಿ ?''

''ಕೆಲವರು ಅದನ್ನು ಆ ಹೆಸರಿನಿಂದ ಕರೆಯುತ್ತಾರೆ. ಅದು ಮೆದುಳಿನ ಮೇಲೆ ಕೆಲಸಮಾಡುತ್ತದೆ. ಯಾರಿಗಾದರೂ ಏನಾದರೂ ಮನಸ್ಸಿಗೆ ಬರುತ್ತದೆ – ಎಂದುಕೊಳ್ಳಿರಿ. ಅವರು ಅದರಲ್ಲಿ ಯಾವ ವಿಷಯವನ್ನು ಹೇಳೋಣ ಯಾವುದು ಬೇಡ ಎಂದು ಆಲೋಚನೆ ಮಾಡಿ ಅನಂತರ ಮಾತನಾಡುತ್ತಾರೆ. ಸ್ಕೋಪೋಲಾಮೈನ್ ಇಂಜಕ್ಷನ್ ಕೊಟ್ಟರೆ ಮನಸ್ಸಿಗೆ ಬಂದ ವಿಷಯ ಬಂದ ಹಾಗೆ ಹೇಳುತ್ತಾರೆ. ಅಂದರೆ ನಾವು ಕೇಳಿದ ಪ್ರಶ್ನೆಗೆ ನಿಜವಾಗಿ ಉತ್ತರ ಹೇಳುತ್ತಾರೆ. ಆತನಿಂದ ಎಷ್ಟೋ ವಿಷಯಗಳನ್ನು ತಿಳಿದುಕೊಂಡೆ,"

"ಏನು ವಿಷಯ ತಿಳಿದುಕೊಂಡಿರೋ ?"

''ಅವನ ಹೆಸರು ಗುಲಾಂ ಅಹ್ಮದ್. ಸರ್ದಾರ್ ವಿಮಲೆಯನ್ನು ಕೊಂದು ಹಾಕು ಎಂದು ಅವನನ್ನು ಕಳುಹಿಸಿದನಂತೆ."

''ಅವನಿಗೇನೋ ಔಷಧಿ ಕೊಟ್ಟು ಅವನ ಬಾಯಲ್ಲಿ ಮಾತನಾಡಿಸಿದರೆ ಅದನ್ನು ನಮ್ಮ ದೇಶದಲ್ಲಿ ಸಾಕ್ಷ್ಯವಾಗಿ ಒಪ್ಪಿಕೊಳ್ಳುವುದಿಲ್ಲ."

''ಸಾಕ್ಷ್ಯವಾಗುವುದಿಲ್ಲವೆಂಬುದಂತೂ ಸರಿ. ಆದರೆ ನಮಗೆ ವಿಷಯ ತಿಳಿದಂತಾಯಿತಲ್ಲ.''

''ವಿಷಯ – ವಿಷಯ ಹೇಗೆ ತಿಳಿದಂತಾಯಿತು ?"

''ಒಂದು ವಿಷಯವಾಗಿ ಈ ಕೇಸು ಮುಗಿದುಹೋದಂತೆಯೇ ಆಯಿತು. ಈ ದಿನ ಸಾಯಂಕಾಲ ರೆಕ್ಸ್ ಹೋಟಲಿಗೆ ಗಣೇಶ ಪಿಳ್ಳೆ ಅಥವಾ ಮತ್ತಾರಾದರೂ ಹಣ ತೆಗೆದುಕೊಂಡು ಬಂದರೆಂದುಕೊಳ್ಳಿ. ಅವನನ್ನು ದಸ್ತಗಿರಿ ಮಾಡಿಬಿಡಬೇಕು. ಹಣ ಎಲ್ಲಿಯದು. ಯಾಕೆ ತೆಗೆದುಕೊಂಡು ಬಂದೆ, ಯಾರಿಗೆ ಹಣ ಕೊಡುತ್ತಿದ್ದೀಯೆ ಎಂದು ಹಿಡಿದುಕೊಳ್ಳಬೇಕು, ಅದೊಂದು. ಆ ಗುಲಾಂ ಅಹಮದ್‌ಗೆ ಜ್ಞಾನ ಬರುವ ವೇಳೆಗೆ ಅಲ್ಲಿ ಯಾರಾದರೂ ಪೋಲೀಸ್‌ನವರದ್ದು ಸ್ಟೇಟ್‌ಮೆಂಟ್ ತೆಗೆದುಕೊಳ್ಳಬೇಕು."

"ಜ್ಞಾನ ಬರುವವರವಿಗೆ—ಅವನಿಗೇನಾಗಿದೆ ?"

"ಆ ಕತ್ತಲು ಕೋಣೆಯಲ್ಲಿ ಇಂಜೆಕ್ಷನ್ ಕೊಟ್ಟು ಆತನಿಂದ ಮಾತನಾಡಿಸಿದೆವಷ್ಟೆ. ಅದೆಲ್ಲಾ ಆದ ನಂತರ ಅವನಿಗೆ ಹೆದರಿ ಪ್ರಾಣ ಹೋಗುವಂತಾಗಿತ್ತು. ಅದೇ ಹೋಟಲ್ ಬಳಿ ಇರುವ ಟರ್ನ್ ನರ್ಸಿಂಗ್ ಹೋಂನಲ್ಲಿಟ್ಟು ನೋಡಿಕೊಳ್ಳುವಂತೆ ಹೇಳಿದ್ದೇನೆ. ನಡುನಡುವೆ ಪ್ರಜ್ಞೆ ಬಂದಾಗ ಭೂತಗಳ ಹೆದರಿಕೆಯಿಂದ ಕಿರುಚಿಕೊಳ್ಳುತ್ತಾನಂತೆ."

"ಕತ್ತಲು ಸಮಯ, ಭೂತಾಕಾರದ ವ್ಯಕ್ತಿಗಳು, ಬುದ್ಧಿ ಕೆಡಿಸಲು ಇಂಜೆಕ್ಷನ್‌ಗಳು ಇವುಗಳ ಪ್ರಭಾವದಿಂದ ಗುಲಾಂ ಅಹ್ಮದ್ ನಿಜವನ್ನೇ ಮಾತನಾಡಿರಬಹುದು. ಆದರೆ ಬೆಳಕಿನಲ್ಲಿ, ಜ್ಞಾನವಿರುವಾಗ ಪೋಲೀಸಿನವರ ಎದುರಿಗೆ ಮಾತನಾಡುತ್ತಾನೆಂದು ಏನು ನಂಬಿಕೆ? ನಿನ್ನೆ ರಾತ್ರಿ ಹೋಟಲಿನಲ್ಲಿ ಸಿಕ್ಕಿಬಿದ್ದಾಗಲೇ ನನಗೆ ಹೇಳಿ ಕಳುಹಿಸಲಿಲ್ಲವೇಕೆ ?"

"ಎಷ್ಟೋ ಕಾರಣಗಳಿದ್ದವು. ನಾನು ಹಾಗೆ ಹೇಳಿ ಕಳುಹಿಸಿದ್ದರೆ ಹತ್ತು ನಿಮಿಷಗಳೊಳಗಾಗಿ ವಿಷಯ ಸರ್ದಾರ್‌ಗೆ ಗೊತ್ತಾಗುತ್ತಿತ್ತು. ಅವನ ಮನೆ ಅಥವಾ ಅಂಗಡಿಗಳನ್ನು ಜಪ್ತಿ ಮಾಡುವವರೆವಿಗೆ ಗುಲಾಂ ಸಿಕ್ಕಿಬಿದ್ದ ವಿಷಯ ಅವನಿಗೆ ತಿಳಿಯುವುದು ನನಗೆ ಇಷ್ಟವಿರಲಿಲ್ಲ."

"ನೀವಂತೂ ಕಾನೂನು ಕಟ್ಟಳೆಗಳನ್ನು ನೋಡದೇ ಕೆಲಸ ಮಾಡುತ್ತೀರಿ. ನಾವೂ ಹಾಗೆಂತ ಮಾಡುವುದಕ್ಕೆ ಆಗುತ್ತದೆಯೇ ಸಂಪತ್ ಸಾಮಿ"

"ನೀವು ಅಸಾಧ್ಯರು, ಕಣ್ರೀ. ಹಳೇ ಕಬ್ಬಿಣದ ಅಂಗಡಿಯವನ ಅಂಗಡಿಯನ್ನು ಜಪ್ತಿಮಾಡಿ ನೋಡಲು ಅಡ್ಡಿಯೇನು. ಅವನೇನು ದೊಡ್ಡ ಮನುಷ್ಯನೇನು ?"

"ದೊಡ್ಡ ಮನುಷ್ಯನೋ ಸಣ್ಣ ಮನುಷ್ಯನೋ. ನಾವು ಎಲ್ಲರಿಗೂ ಒಂದೇ ಸಮನಾಗಿರಬೇಕೋ ಬೇಡವೋ? ಹೋಗಲಿ, ಅಷ್ಟಕ್ಕೂ ಅಲ್ಲಿ ಏನು ಸಿಕ್ಕುತ್ತದೆಂದುಕೊಂಡಿದ್ದೀರಿ"

"ಗುಲಾಂಅಹ್ಮದ್ ಹೆಣ್ಣು ವೇಷದಲಿ ಹೋಟಲಿಗೆ ಬಂದಿದ್ದ ಟ್ರಂಕು ಬೆಡ್ಡಿಂಗಳನ್ನು ತೆಗೆದುಕೊಂಡು ಪ್ರಯಾಣಿಕನಂತೆ ರಾತ್ರಿ ಹತ್ತು ಗಂಟೆಯ ಸಮಯದಲ್ಲಿ ಹೋಟಲಿಗೆ ಬಂದು ಸೇರಿದ. ಹಾಗಾದರೆ ಅವನ ವಾಸ್ತವವಾದ ಬಟ್ಟೆ ಬರೆಗಳೆಲ್ಲಿರಬೇಕು. ಗುಲಾಂ ಅವು ಸರ್ದಾರನ ಅಂಗಡಿ

ಯಲ್ಲಿರುವುದಾಗಿ ಹೇಳುತ್ತಾನೆ. ಅಂತೂ ಅವು ಅಂಗಡಿಯಲ್ಲಿಯೋ ಮನೆ ಯಲ್ಲಿಯೋ ಇರಬೇಕು "

ಇಬ್ರಾಹಿಂಸಾಹೇಬರು ಏನು ಹೇಳುವುದಕ್ಕೂ ತೋರದೇ ಸುಮ್ಮನೆ ಕುಳಿತುಕೊಂಡರು.

"ಇಷ್ಟೇ ಇಲ್ಲ ಸಾಹೇಬರೇ ನೋಡಿ. ಆರ್ಮುಗಂ ಆಸ್ಪತ್ರೆಯ ಲ್ಲಿರುವಾಗಲೇ ಅವನ ಮನೆಯನ್ನು ಹುಡುಕಿ ನೋಡಬೇಕು."

"ಅವನು ತಪ್ಪು ಮಾಡಿದನೆಂದು ನಾನಿನ್ನೂ ಖಚಿತವಾಗಿ ಹೇಳುವು ದಿಲ್ಲ ಆದರೆ ನೋಡೀ ಸಾಹೇಬರೇ. ಈ ಪ್ರಸಂಗದಲ್ಲಿ ಸ್ತ್ರೀ ವೇಷಧಾರಿ ಗಳ ಕೈವಾಡವು ಬಹಳವಾಗಿರುವಂತೆ ನನಗೆ ತೋರುತ್ತದೆ. ಈಗ ಗುಲಾಂ ಸ್ತ್ರೀ ವೇಷಧರಿಸಿ ಬಂದ. ಬಾಬೂರಾಯರು ಕೊಲೆಯಾದ ರಾತ್ರಿ ಅವರ ಮನೆಯಿಂದ ಹೆಂಗಸೊಬ್ಬಳು ಹೊರಬಿದ್ದುದನ್ನು ಬೀಟ್ ಪೋಲೀಸಿನವರು ನೋಡಿದುದಾಗಿ ಹೇಳಿದ್ದೀರಿ. ಅದು ನಿಮಗೆ ಜ್ಞಾಪಕವಿದೆಯೆ ? "

ಸಾಹೇಬರು ವಿಸ್ಮಿತರಾಗಿ, ಗಡ್ಡ ನೀವಿಕೊಂಡು, ತಲೆಯಾಡಿಸುತ್ತಾ ಅಂದರು.

"ನೀವು ಹಿಂದೂಲೋಗ್‌ಗೆ ಬಹಳ ಬುದ್ಧಿ ಸಾಮಿ. ಆಕಾಶದಲ್ಲಿರುವ ನಕ್ಷತ್ರಗಳಿಗೂ ಭೂಮಿಯಲ್ಲಿರುವ ಮನುಷ್ಯರಿಗೂ ಗಂಟುಹಾಕಿ ಜ್ಯೋತಿಷ್ಯ ಹೇಳಿದ ಹಾಗೆ ಹೇಳುತ್ತಿದ್ದೀರಿ. ಅಲ್ಲೂ ಹೆಂಗಸು ಕಂಡು ಬಂದಳು. ಇಲ್ಲೂ ಹೆಂಗಸೇ ಖೂನಿ ಮಾಡಲು ಬಂದಿದ್ದಳು. ವಿಷಯ ಸರಿ. ಆದರೆ ಆರ್ಮುಗಂ ನನ್ನು ಇದರಲ್ಲಿ ಹೇಗೆ ತರುತ್ತೀರಿ ? "

"ಅದೊಂದು ಊಹೆ ಅಷ್ಟೇ. ಈಗಲೇ ಖಚಿತವಾಗಿ ಏನನ್ನೂ ಹೇಳಲಾಗುವುದಿಲ್ಲ. ಪಾಪುಲರ್‌ನಲ್ಲಿ ನಡೆದ ಜಗಳ ಆರ್ಮುಗಂಗೂ ಆನಂ ದ್‌ಗೂ. ಆರ್ಮುಗಂನನ್ನು ಸಾಯುವಂತೆ ಹೊಡೆದವನು ಬಾಷಾನೇ ಎಂದು ನನ್ನ ಭಾವನೆ ಅವನಿಗೂ ಅದು ಗೊತ್ತಿರಬೇಕು. ಆದರೆ ಆರ್ಮುಗಂ ಯಾಕೆ ಬಾಷಾ ಹೆಸರು ಹೇಳುವುದಿಲ್ಲ? ಹೇಳಬಾರದು ನಾವುದೋ ಗುಟ್ಟಿರ ಬೇಕು, ಆರ್ಮುಗಂನ ಜೀವನದಲ್ಲಿ "

[೧೪]

"ನೀವು ಹಾಗೆ ಲೆಕ್ಕಹಾಕುವುದಾದರೊಂದು ತೊಂದರೆ ಬರುತ್ತದೆ. ನಮಗೆ ತಿಳಿದಿರುವಂತೆ ಬಾಷಾ, ಗುಲಾಂಮಹಮದ್‌ಗಳು ಸರ್ದಾರನ ಜೊತೆಯಲ್ಲಿ ಓಡಿಯಾಡುವ ರೌಡಿಗಳು ಆರ್ಮುಗಂನನ್ನು ಬಾಷಾ ಹೊಡೆದಿದ್ದರೆ ಅವನು ಈ ಗುಂಪಿನ ವಿರೋಧಿ ಆರ್ಮುಗಂ ಮನೆಯಲ್ಲಿ ಯಾರೂ ಹೆಂಗಸರಿಲ್ಲದಿದ್ದು ಅವನ ಮನೆಯಲ್ಲಿ ಸೀರೆ ಕುಪ್ಪಸ ಮೊದಲಾದ ಬಟ್ಟೆಗಳ್ಳ ಸಿಕ್ಕಿದರೆ ಅವನೇ ಆ ರಾತ್ರಿ ಬಾಬೂರಾಯರ ಮನೆಯಿಂದ ಹೊರಬಿದ್ದ ಸ್ತ್ರೀ ವ್ಯಕ್ತಿ ಎಂದಾಗುತ್ತದೆ. ಸರ್ದಾರ್ ಕಡೆಯವರಿಗೆ ಆರ್ಮುಗಂನೊಡನೆ ವಿರೋಧವಾಗಲು ಕಾರಣವೇನು ?"

"ಸರಿಹೋಗುವುದಿಲ್ಲವೆಂದು ನೀವು ಯಾವುದನ್ನು ಹೇಳುತ್ತೀರೊ ಅವರಿಂದಲೇ ಸರಿಹೋಗಿದೆ ಎಂದು ನಾನು ಹೇಳುತ್ತಿರುವುದು. ಗುಲಾಂ ಮಹಮದ್‌ನೊಡನೆ ಮಾತನಾಡಿದ್ದರಲ್ಲಿ ಅವನು ಹೇಳಿದ ಸರ್ದಾರ್ ವಿಮಲೆಯನ್ನು ಕೊಲೆಮಾಡಲು ಕಳುಹಿಸಿದನೆಂದು. ವಿಮಲೆಯನ್ನು ಕೊಲೆ ಮಾಡುವುದರಲ್ಲಿ ಸರ್ದಾರಿಗೇನು ಉದ್ದೇಶ ? ಹೀಗೆ ಲೆಕ್ಕಹಾಕೋಣ. ವಿಮಲೆಗೂ ಸರ್ದಾರ್‌ಗೂ ವಿರೋಧವಿರಲು ಕಾರಣವಿಲ್ಲ. ವಿಮಲೆ ತನಗೆ ಗಣೇಶ ಪಿಳ್ಳೆಯಿಂದ ಭಯವಿದೆ ಎಂದು ಸ್ಪಷ್ಟವಾಗಿ ಬರೆದಿದ್ದಾಳೆ. ಅಂದರೆ ಗಣೇಶ ಪಿಳ್ಳೆಗಾಗಿ ಸರ್ದಾರ್ ಅವಳನ್ನು ಕೊಲೆ ಮಾಡಿಸಲು ಪ್ರಯತ್ನ ಮಾಡಿರಬಹುದು. ವಿಮಲೆಯ ಮೇಲೆ ನಡೆದಂತೆಯೇ ಆರ್ಮುಗಂ ಮೇಲೆಯೂ ಒಂದು ಪ್ರಯತ್ನ ನಡೆದಿರಬಾರದೇಕೆ ?"

"ಅಂತೂ ನೀವು ಹೇಳುವುದೆಲ್ಲವೂ ವಿಚಿತ್ರವಾಗಿದೆ. ಏನೇನು ಮಾಡಬೇಕೆನ್ನುತ್ತೀರಿ, ಹೇಳಿ ಸ್ವಾಮಿ"

"ಮೊದಲು ಸರ್ದಾರನ ಅಂಗಡಿಯನ್ನು ಜಫ್ತೀ ಮಾಡಿಸಿ. ನನಗೆ ತೋರುವಂತೆ ಅಲ್ಲಿ ಗುಲಾಮಿನ ಬಟ್ಟೆ ಬರೆಗಳಿರುತ್ತವೆ. ಗುಲಾಂಗೆ ಸಾಮಿಾಲೆಂದು ಸರ್ದಾರನನ್ನು ದಸ್ತಗಿರಿ ಮಾಡಿ. ಸಾಧ್ಯವಾದರೆ ಬಾಷಾನನ್ನೂ ಹಿಡಿದುಹಾಕಿ. ಆರ್ಮುಗಂ ಮನೆಯಲ್ಲಿ ಹೆಣ್ಣು ವೇಷಕ್ಕೆ ಬೇಕಾದ ಸಾಧನಗಳಿವೆಯೇ ನೋಡಿ. ಅವನ ಮನೆಯಲ್ಲಿ ಹೆಂಗಸರಿದ್ದರೂ ಜಫ್ತೀ ಮಾಡಲೇಬೇಕು-ಟೋರ್ಫ ಸಿಕ್ಕಿದರೂ ಸಿಕ್ಕಬಹುದು"

"ಇದರಿಂದ ಬಾಬೂರಾಯರ ಕೊಲೆ ಪತ್ತೆಯಾದಂತೆ ಆಗುವುದೇ ?"

"ಬಹುಮಟ್ಟಿಗೆ ಆಗುತ್ತದೆ. ನೀವು ಒಂಬತ್ತು ಗಂಟೆಯೊಳಗೆ ಇವರುಗಳನ್ನೆಲ್ಲಾ ದಸ್ತಗಿರಿ ಮಾಡಿ ಪತ್ರಿಕೆಗಳಲ್ಲಿ ದಸ್ತಗಿರಿಯಾಯಿತೆಂದು ವರ್ತಮಾನ ಪ್ರಕಟವಾದರೆ ಗಣೇಶ ಪಿಳ್ಳೆಯೋ ಅಥವಾ ಮತ್ತಾರಾದರೂನೋ ಹಣ ತೆಗೆದುಕೊಂಡು ಸಾಯಂಕಾಲ ರೆಕ್ಸ್ ಹೋಟಲಿಗೆ ಬಂದೇ ಬರುತ್ತಾರೆ. ಇಷ್ಟೊಂದು ಗಲಾಟೆಗಳಾಗಿರುವಾಗ ದಾಸಪ್ಪ ನಾಯಿಡು ಮತ್ತು ವಿಮಲೆಯರೊಂದಿಗೆ ಜಗಳ ಮಾಡಿಕೊಳ್ಳುವುದು ಅವರಿಗಿಷ್ಟವಿರುವುದಿಲ್ಲ.

"ಇದೆಲ್ಲಾ ಸರಿ. ನೀವು ಪುನಃ ಸಿಕ್ಕುವುದು ?"

"ನಾನು ಎಂಟು ಗಂಟೆಯಾಗಿರುವಾಗ ವಿಮಲೆಯನ್ನು ಕರೆದುಕೊಂಡು ಮೈಸೂರಿಗೆ ಹೋಗುತ್ತೇನೆ. ಅಲ್ಲಿಂದ ಹನ್ನೆರಡು ಒಂದು ಗಂಟೆಯ ವೇಳೆಗೆ ಸೆಂಟ್ರಲ್ ಪೋಲೀಸ್ ಸ್ಟೇಷನ್ನಿಗೆ ಫೋನ್ ಮಾಡುತ್ತೇನೆ. ಸಾಯಂಕಾಲ ರೆಕ್ಸ್ ಹೋಟಲಿಗೆ ಬರುತ್ತೇನೆ. ಅಲ್ಲಿಯವರೆವಿಗೆ ನಾನು ದಾಸಪ್ಪನಾಯಿಡುವಾಗಿಯೇ ಇರಬೇಕು"

ಇಬ್ರಾಹಿಂ ಸಾಹೇಬರು ಹೊರಡಲುದ್ಯುಕ್ತರಾಗಿ ಎದ್ದು ನಿಂತು ಕೇಳಿದರು.

"ನೀವು ನಿನ್ನೆಯಿಂದ ದಾಸಪ್ಪ ನಾಯಿಡು ಎಂದು ಹೇಳಿಕೊಂಡು ರೆಕ್ಸ್ ಹೋಟಲಿನಲ್ಲಿದ್ದೀರಲ್ಲಾ. ಅಲ್ಲಿನ ಮ್ಯಾನೇಜರಿಗೆ ನೀವಾರೆಂಬುದು ತಿಳಿಯದೇನು ?"

"ತಿಳಿಯದೇ ಏನು ? ಹೋಟಲಿನ ಮ್ಯಾನೇಜರು ಮ್ಯಾಥ್ಯೂಸ್‌ಗೆ ಮೊದಲೇ ಸೂಕ್ಷ್ಮವಾಗಿ ನಾನು ವೇಷ ಬದಲಾಯಿಸಿಕೊಂಡಿರಬೇಕಾಗುತ್ತದೆಂದು ಹೇಳಿದ್ದೆ. ಇಲ್ಲದಿದ್ದರೆ ಬಹಳ ತೊಂದರೆಯಾಗುತ್ತಿತ್ತು. ಮತ್ತೊಂದು ಪುಣ್ಯ, ನೋಡಿ. ವಿಮಲೆಯಾಗಲೀ ಅಥವಾ ವೈಯ್ಯಾಳೀ ಕಾವಲ್ ಕಂಪನಿಯವರಾಗಲೀ ನನ್ನನ್ನು ಎಂದೂ ನೋಡಿಯೇ ಇರಲಿಲ್ಲ"

# ೧೬

ಪ್ರಾತಃಕಾಲ ವಿಮಲೆ ಕಾಫೀ ಕುಡಿಯುತ್ತಿದ್ದಾಗಲೇ ದಾಸಪ್ಪ ನಾಯುಡು ರಿಟ್ಸ್ ಹೋಟಲಿನಲ್ಲಿ ಅವಳನ್ನು ಭೇಟಿ ಮಾಡಿದ.

ವಿಮಲೆ ಬಹಳ ಖುಷಿಯಾಗಿದ್ದಳು. ಅವಳಿಗೆ ಗೊತ್ತಿದ್ದ ಹಾಗೆ ರಾತ್ರಿ ಯಾವ ಅಘಟಿತಘಟನಾವಳಿಗಳೂ ನಡೆದಿರಲಿಲ್ಲ. ಪಿಳ್ಳೆ, ಹೆದರಿರಬೇಕು. ಆದುದರಿಂದಲೇ ಏನೂ ಮಾಡಲಿಲ್ಲ. ರಾತ್ರಿಯೇ ಏನೂ ಆಗದಿರುವಾಗ ಇನ್ನು ಹಗಲು ಹೊತ್ತು ಏನು ತಾನೇ ಆಗುತ್ತದೆ! ಅದೂ ಅಲ್ಲದೇ ದಾಸಪ್ಪ ನಾಯುಡು ಅವಳನ್ನು ಮೈಸೂರಿಗೆ ಕರೆದುಕೊಂಡು ಹೋಗಿ ಸಾಯಂಕಾಲದ ಹೊತ್ತಿಗೆ ವಾಪ್ಸು ತಂದು ಬಿಡುವುದಾಗಿ ಹೇಳಿದ್ದಾನೆ.

ಐವತ್ತು ಸಾವಿರ ರೂಪಾಯಿ ಕೈಗೆ ಸಿಕ್ಕಿದಂತೆಯೇ ಆಗಿದ್ದಿತವಳಿಗೆ.

ದಾಸಪ್ಪ ನಾಯುಡು ಕೋಣೆಯೊಳಗೆ ಪ್ರವೇಶ ಮಾಡುತ್ತಿದ್ದ ಹಾಗೆಯೇ ಅವಳ ಯೋಗಕ್ಷೇಮ ಮಾಡಿದ.

"ಏನು, ವಿಮಲಾ. ರಾತ್ರಿ ಚೆನ್ನಾಗಿ ನಿದ್ದೆ ಬಂದಿತೋ ?"

"ತಮ್ಮ ದಯ. ನಿದ್ದೆಯೂ ಬಂದಿತು. ಸುರಕ್ಷಿತವಾಗಿಯೂ ಇದ್ದೇನೆ. ಹೇಗೋ ಈ ಸಾಯಂಕಾಲದವರೆವಿಗೂ ದಡ ಹಾಯಿಸಿದರೆ........?"

ವಿಮಲಾ ಬೆಲ್ ಮಾಡಿ, ಬಂದ ಹುಡುಗನನ್ನು ಕುರಿತು ಮತ್ತೊಂದು ಕಪ್ಪು ಕಾಫೀ ತರುವಂತೆ ಹೇಳಿದಳು. ಅವನು ಕಾಫೀ ತಂದಿಟ್ಟು ಹೋದ ನಂತರ ಅಂದಳು.

"ನಿನ್ನೆ ರಾತ್ರಿ ಏನೋ ಹೇಳಬೇಕೆಂದುಕೊಂಡಿದ್ದುವಷ್ಟರಲ್ಲಿ ಹೊರಟು ಹೋದಿರಿ. ಪುನಃ ಬರುತ್ತೀರೇನೋ ಎಂದುಕೊಂಡಿದ್ದೆ. ಪತ್ತೆಯೇ ಇಲ್ಲ. ಎಲ್ಲಿಗೆ ಹೊರಟು ಹೋದಿರಿ ?"

"ಏನು ಹೇಳಬೇಕಾಗಿತ್ತೋ ?"

[illegible] ಸಂಗತಿ, ನಕ್ಕು. ವಿಮಲೆ ಹೇಳಿದಳು.

"[illegible] [illegible], ಕುಳಿತುಕೊ"

"[illegible] ಬೇಗನೆಯಾಗಿ ಮೈಸೂರಿಗೆ ಹೋಗಬೇಕೆಂದು

ನಾನು ಹೇಳಿರಲಿಲ್ಲವೇ ?"

"ನಡೆಯಿರಿ. ಹೋಗೋಣ. ದಾರಿಯಲ್ಲಿಯೇ ಮಾತನಾಡೋಣವಂತೆ"

ಸ್ನಾನ ಮಾಡಿ, ಶೃಂಗರಿಸಿಕೊಂಡು ವಿಮಲೆ ಹೊರಡಲನುವಾಗಲು ಅರ್ಧ ಗಂಟೆಯಾಯಿತು. ದಾಸಪ್ಪ ನಾಯಿಡು ಅವಸರ ಪಡುತ್ತಿದ್ದುದರಿಂದ ನಿದಾನವಾಗಿ ಮಾತನಾಡಲು ಸಾಧ್ಯವಾಗಲಿಲ್ಲ.

ಇಬ್ಬರೂ ಕಾರಿನಲ್ಲಿ ಕುಳಿತು ಹೊರಟರು.

ದಾಸಪ್ಪ ನಾಯಿಡು ಸಹ ಖುಷಿಯಾಗಿಯೇ ಇದ್ದ. ಹೇಗೋ ಸಾಯಂ ಕಾಲದ ಹೊತ್ತಿಗೆ ಈ ವ್ಯವಹಾರವೆಲ್ಲವೂ ಮುಕ್ತಾಯವಾಗಿ ಹೋಗುತ್ತ ದೆಂದು ನಂಬಿಕೆ ಇತ್ತು. ಅಷ್ಟು ಹೊತ್ತಿಗೆ ಇಬ್ರಾಹಿಂ ಸಾಹೇಬರು ಏನೇನು ಮಾಡುತ್ತಿರಬಹುದೆಂದು ಲೆಕ್ಕ ಹಾಕಿಕೊಳ್ಳುತ್ತಿದ್ದ. ಅದರಿಂದ ಅವನು ಮಾತನಾಡುತ್ತಿರಲಿಲ್ಲ.

ಎಲೆಕ್ಟ್ರಿಕ್ ಫ್ಯಾಕ್ಟರಿಯಿಂದ ಎರಡು ಮೈಲಿಗಳ ಆಚೆ ಜನ ಸಂದಣಿಯು ಕಳೆದನಂತರ ವಿಮಲೆ ಮಾತನಾಡತೊಡಗಿದಳು. ನಾಯಿಡುವಿನ ಮೇಲೆ ಪ್ರಭಾವವಾಗುವಂತೆ ತನ್ನ ವಿಷಯವೆಲ್ಲವನ್ನೂ ಹೇಳುತ್ತಿದ್ದಳು. ಅವಳ ತಂದೆ ದೊಡ್ಡ ಡಾಕ್ಟರು. ವಿಪರೀತ ಶ್ರೀಮಂತರು. ಶ್ರೀಮಂತರ ಹುಡುಗನೊಡನೆ ಅವಳ ಮದುವೆಗೆ ಗೊತ್ತಾಗಿತ್ತು. ಯಾರೋ ಬಡವನನ್ನು ಪ್ರೀತಿಸಿ ಮನೆ ಯಿಂದ ಹೊರಗೆ ಬಂದಳು. ಆ ಬಡವನೂ ಕೈಬಿಟ್ಟು ಹೊರಟು ಹೋದ. ಭಗ್ನ ಪ್ರಣಯಿಯಾದ ಅವಳು ಹೇಗೋ ನಿರರ್ಥಕವಾದ ಜೀವನವನ್ನು ಕಳೆ ಯುತ್ತಿದ್ದಾಳೆ.

ದಾಸಪ್ಪ ನಾಯಿಡುವು ಸಹ ಅವಳು ಹೇಳುವುದೆಲ್ಲವನ್ನೂ ಕೇಳುತ್ತಿದ್ದ. ಇವಳು ಹೇಳುವುದರಲ್ಲಿ ಯಾವುದಾದರೂ ಒಂದಾದರೂ ನಿಜವೇ–ಎಂದು ಅವನ ಮನಸ್ಸು ಆಲೋಚನೆ ಮಾಡುತ್ತಿತ್ತು.

ಬರುತ್ತಿದ್ದುದು ಸಣ್ಣ ಗಾಡಿಯಲ್ಲಾದುದರಿಂದ ಇಬ್ಬರಿಗೂ ಆಯಾಸ ವಾಗಿತ್ತು. ಮೈಸೂರನ್ನು ಪ್ರವೇಶಿಸುತ್ತಿದ್ದ ಹಾಗೆಯೇ ಟಾಜ್ ಹೋಟಲು. ಅದರ ಬಳಿ ಕಾರು ನಿಲ್ಲಿಸಿ ನಾಯಿಡು ಹೇಳಿದ.

"ಬಾಯಾರಿಕೆಯಾಗುತ್ತದೆ, ವಿಮಲಾ. ಸ್ವಲ್ಪ ಕೋಲ್ಡ್ ಬಿಯರ್ ತೆಗೆದುಕೊಂಡು ಹೋಗೋಣ"

ಇಬ್ಬರೂ ಒಳಗೆ ಹೋದರು. ನಾಯಿಡು ಒಂದು ಗ್ಲಾಸಿನಷ್ಟು ಬಿಯರ್ ಕುಡಿದು ಸಿಗರೇಟ್ ಹಚ್ಚಿಕೊಂಡು ನೋಡಿದ. ವಿಮಲೆ ಮೂರು ನಾಲ್ಕು ಗುಟುಕುಗಳಷ್ಟನ್ನು ಮಾತ್ರ ಕುಡಿದಿದ್ದಳು.

''ಒಂದು ನಿಮಿಷ. ಸ್ವಲ್ಪ ಫೋನ್ ಮಾಡಿಬಿಟ್ಟು ಬರುತ್ತೇನೆ, ಕುಳಿತುಕೋ"

ಅವಳ ಉತ್ತರವನ್ನು ನಿರೀಕ್ಷಿಸದೇನೇ ನಾಯಿಡು ನೇರವಾಗಿ ಟೆಲಿಫೋನಿನ ಬಳಿ ಹೋದ. ಎಕ್ಸ್‌ಚೇಂಜ್‌ನವರ ಪರಿಚಯವಿದ್ದುದರಿಂದ ಕೂಡಲೇ ಅವನಿಗೆ ಕನೆಕ್ಷನ್ ಸಿಕ್ಕಿತು. ಇಬ್ರಾಹಿಂ ಸಾಹೇಬರೂ ಅವನ ಕಾಲ್‌ಗಾಗಿ ನಿರೀಕ್ಷಿಸುತ್ತಿದ್ದರೆಂದು ಕಂಡುಬರುತ್ತದೆ.

"ಏನು ಸಮಾಚಾರ ಸಾಹೇಬರೇ !"

"ಸಮಾಚಾರ. ಸಮಾಚಾರ ಸರಿಯಾಗಿಯೇ ಇದೆ. ನೀವು ಹೇಳಿದಂತೆ ಆರ್ಮುಗಂ ಮನೆಯಲ್ಲಿ ಯಾರೂ ಇರಲಿಲ್ಲ. ಮನೇ ಬೀಗ ಹಾಕಿತ್ತು. ನಮ್ಮವರೇ ಬೀಗ ತೆಗೆದು ನೋಡಿದರು. ಪೆಟ್ಟಿಗೆಯೊಂದರಲ್ಲಿ ಟೋಪನ್ನು, ಎದೆಗೆ ಕಟ್ಟಿಕೊಳ್ಳುವ ಬಟ್ಟೆ ಚೆಂಡುಗಳು, ಕೈಬಳೆಗಳು, ಲಿಪ್‌ಸ್ಟಿಕ್, ಸೀರೇ, ರವಿಕೆ ಇತ್ಯಾದಿಗಳು ಸಿಕ್ಕಿದವು. ಸರ್ದಾರನ ಅಂಗಡಿಯಲ್ಲಿ ಸಿಕ್ಕಿದ ಬಟ್ಟೆಗಳು ತನ್ನವೆಂದು ಗುಲಾಂ ಮಹಮದ್ ಒಪ್ಪಿಕೊಂಡಿದ್ದಾನೆ. ಬಾಷಾ ಮತ್ತು ಸರ್ದಾರನನ್ನು ದಸ್ತಗಿರಿ ಮಾಡಲಾಗಿದೆ. ಆದರೆ........"

"ಏನು ಆದರೆ............"

''ನಮ್ಮ ಪ್ರಾಸಿಕ್ಯೂಟಿಂಗ್ ಇನ್ಸ್‌ಪೆಕ್ಟರು ಎಲ್ಲವನ್ನೂ ನೋಡಿ ಹೇಳ್ತಾರೆ. ಇವರಾರನ್ನೂ ಏನೂ ಮಾಡುವುದಕ್ಕೆ ಆಗುವುದಿಲ್ಲವಂತೆ. ಆರ್ಮುಗಂ ಸಾಕ್ಷೀ ಕೊಡುವವರೆವಿಗೆ ಬಾಷಾ ಹೊಡೆದನೆಂದು ಕೇಸು ಮಾಡಲಾಗುವುದಿಲ್ಲ. ಆರ್ಮುಗಂ ತನ್ನನ್ನು ಹೊಡೆದುದು ಬಾಷಾ ಅಲ್ಲವೆಂದು ಹೇಳುತ್ತಾನೆ. ಸರ್ದಾರನ ಅಂಗಡಿಯಲ್ಲಿ ಗುಲಾಂನ ಬಟ್ಟೆಗಳಿರುವುದರಿಂದಲೂ, ಈಗ ಸದ್ಯದಲ್ಲಿ ಗುಲಾಂ ಹೆಣ್ಣುಡುಪು ಹಾಕಿಕೊಂಡಿರುವುದರಿಂದಲೂ ಏನು ಅಪರಾಧವೂ ಸಾಬೀತಾಗುವುದಿಲ್ಲ. ನಿನ್ನೆ ಗುಲಾಂ ಹೋಟೆಲಿಗೆ ಬಂದಿದ್ದಾಗ ಹಿಡಿದಿದ್ದರೆ ಏನಾದರೂ ಮಾಡಬಹುದಾಗಿತ್ತು-ಎನ್ನುತ್ತಾರೆ"

"ಇಲ್ಲಿಯವರೆವಿಗೆ ಎಲ್ಲಾ ನಾನು ಅಂದುಕೊಂಡ ಹಾಗೆಯೇ ಆಗುತ್ತಿದೆ-ಎನ್ನಿ"

"ಆಗುತ್ತಿದೆಯಪ್ಪಾ, ಮಹರಾಯ. ಅಕಾರಣವಾಗಿ ಇಷ್ಟೊಂದು ದಸ್ತಗಿರಿಗಳನ್ನು ಯಾಕೆ ಮಾಡಿದೆ ಎಂದು ಅರಸರೂ ಸಿಡುಗುಟ್ಟುತ್ತಿದ್ದಾರೆ"

"ಈ ಐ. ಜಿ. ಗಳು ಬಿಡೀಪ್ಪ. ಎಲ್ಲದಕ್ಕೂ ಸಿಡಿಗುಟ್ಟುತ್ತಲೇ ಇರುತ್ತಾರೆ"

"ನೀವು ಹೇಗೆ ಬೇಕಾದರೂ ಮಾತನಾಡಬಹುದು. ನಾವು ಹಾಗೆ ಮಾತನಾಡುವುದಕ್ಕೆ ಆಗುತ್ತದೆಯೇ? ಈಗ ನನ್ನನ್ನು ಸಿಕ್ಕಿಸಿ ಬಿಟ್ಟಿದ್ದೀರಿ ಹೇಗಾದರೂ ಮಾಡಿ ಊರಿಗೆ ಬಂದು ಒಂದು ಇತ್ಯರ್ಥ ಮಾಡಿಬಿಡೀಪ್ಪ"

"ಮಾಡುತ್ತೇನೆ. ಸ್ವಲ್ಪ ಗಣೇಶ ಪಿಳ್ಳೆಯ ಮೇಲೆ ನಿಗಾ ಇಟ್ಟಿರಿ. ಅವನು ಎಲ್ಲಿಯೂ ತಪ್ಪಿಸಿಕೊಂಡು ಹೋಗದ ಹಾಗೆ ನೋಡಿಕೊಳ್ಳುತ್ತೀರಿ. ಸಾಯಂಕಾಲ ರೆಕ್ಸ್ ಹೋಟಲಿನ ಬಳಿ ಭೇಟಿಯಾಗೋಣ"

ಮಾತು ಮುಗಿಸಿಕೊಂಡು ಟೇಬಲ್ ಬಳಿಗೆ ಬರುವ ವೇಳೆಗೆ ಮೇಜದ ಮೇಲೆ ಮತ್ತೊಂದು ಬಿಯರ್ ಬಾಟಲ್ ಇತ್ತು. ವಿಮಲೆ ನಗುತ್ತಾ ಹೇಳಿದಳು.

"ನಿಮ್ಮನ್ನು ಕೇಳದೇನೇ ಇನ್ನೊಂದು ಬಿಯರ್ ತರಿಸಿಕೊಂಡೆ"

"ಇನ್ನೂ ಎರಡು ಬೇಕಾದರೂ ತರಿಸಿಕೋ. ಸ್ವಲ್ಪ ತಿಂಡಿಯನ್ನೂ ತರಿಸಿಕೊಂಡು ತಿಂದುಬಿಡು. ನಾವು ಅರ್ಜೆಂಟಾಗಿ ಬೆಂಗಳೂರಿಗೆ ವಾಪ್ಸು ಹೋಗಬೇಕು"

"ಅದೇನು, ಬಂದದ್ದು ಹೋಗುವುದು. ಎರಡು ಮೂರು ಗಂಟೆಗಳ ಕಾಲ ಯಾವುದಾದರೂ ಹೋಟಲಿನಲ್ಲಿ ವಿಶ್ರಾಂತಿ ತೆಗೆದುಕೊಂಡು ಅನಂತರ ಹೊರಡುವುದು—ಎಂದಿದ್ದೆ"

"ಇಲ್ಲ. ಬೇಗ ಹೋಗಬೇಕು?"

"ಅದೇನು ಅಷ್ಟು ಅವಸರ?"

"ನಾನು ಸ್ವಲ್ಪ ಸೆಂಟ್ರಲ್ ಪೋಲೀಸ್ ಸ್ಟೇಷನ್ನಿಗೆ ಹೋಗಬೇಕು"

"ಏನು, ನೀವು ಹೇಳುವುದೊಂದೂ ನನಗೆ ಅರ್ಥವಾಗುತ್ತಿಲ್ಲವಲ್ಲ"

"ಅರ್ಥವಾಗುವಂತಹದೇನೂ ಇಲ್ಲ, ವಿಮಲ. ನೀನು ಗಂಭೀರವಾಗಿ ಬೆಂಗಳೂರಿಗೆ ನಡೆ. ನೇರವಾಗಿ ನಿಮ್ಮ ಮನೆ ಎಲ್ಲಿದೆಯೋ ಅಲ್ಲಿಗೆ ಹೋಗು. ಗಣೇಶ ಪಿಳ್ಳೆಯ ಬಳಿ ಇರುವ ಹಣ ಅವರಪ್ಪನ ಮನೆಯದಲ್ಲ. ಅದು ಕದ್ದ ಹಣ. ಆ ಹಣ ನಿನಗೆ ಸಿಕ್ಕುವುದೂ ಇಲ್ಲ. ನಿನಗೆ ಸಿಕ್ಕಿದರೆ ನಾನು ನೋಡಿ ಕೊಂಡಿರುವುದಕ್ಕೂ ಆಗುವುದಿಲ್ಲ. ನೀನು ಇದುವರೆವಿಗೆ ಅವರೊಡನೆ ಓಡಿ ಯಾಡಿದ್ದೇ ಹೆಚ್ಚು. ಇನ್ನು ಮುಂದೆ ಈ ತಂಟೆ ತಕರಾರುಗಳಿಗೆ ಹೋಗ ಬೇಡ"

ವಿಮಲೆ ವಿಸ್ಮಿತಳಾಗಿ ನೋಡಿದಳು.

ದಾಸಪ್ಪ ನಾಯಿಡು ವಾಸ್ತವವಾಗಿ ತಾನಾರೆಂಬುದನ್ನು ಅವಳಿಗೆ ತಿಳಿ ಸಿದ.

ಗ್ಲಾಸುಗಳಲ್ಲಿಯೂ ಸೀಸಾಯಿಯಲ್ಲಿಯೂ ಉಳಿದಿದ್ದ ಬಿಯರ್ ವಿಮಲೆ ಕುಡಿಯಲೂ ಇಲ್ಲ. ಬೆಂಗಳೂರು ತಲಪುವವರೆವಿಗೆ ಮತ್ತು ಅನಂತರ ಅವಳು ಮಾತನಾಡಲೂ ಇಲ್ಲ.

## ೧೭

ಸಂಪತ್‌ನ ಲೆಕ್ಕಾಚಾರಗಳಲ್ಲಿ ಒಂದು ತಪ್ಪಾಯಿತು. ರೆಕ್ಸ್ ಹೋಟ ಲಿಗೆ ಆದಿನ ಸಾಯಂಕಾಲ ಗಣೇಶ ಪಿಳ್ಳೆಯಾಗಲೀ ಅಥವಾ ಮತ್ತಾರಾದರೂ ಆಗಲೀ ಬರಲಿಲ್ಲ. ಒಂದು ಗಳಿಗೆಯ ಹೊತ್ತು ಸಂಪತ್‌ಗೆ ತಬ್ಬಿಬ್ಬಾಯಿತು. ಅನಂತರ ಅವನು ಹೇಳಿದ.

"ಸಾಹೇಬರೇ ! ಹೆಚ್ಚು ಹೊತ್ತು ಅವಕಾಶವಿಲ್ಲ. ಬನ್ನಿ, ನಾವು ಹೋಗೋಣ. ನಿಮ್ಮ ಜೊತೆಯಲ್ಲಿರುವ ಶಿಷ್ಯರು ಇಲ್ಲಿರಲಿ"

ಜೊತೆಯಲ್ಲಿದ್ದ ಸುಂದರ್‌ನೊಂದಿಗೆ ಪ್ರತ್ಯೇಕವಾಗಿ ಮಾತನಾಡಿಕೊಂಡು ಸಂಪತ್ ಇಬ್ರಾಹಿಂ ಸಾಹೇಬರೊಂದಿಗೆ ಗಾಂಧೀನಗರದಲ್ಲಿದ್ದ ವೈಯ್ಯಾಳೀ ಕಾವಲ್ ಕಂಪನಿಗೆ ಹೋದ. ಅದರ ಬಾಗಿಲು ಹಾಕಿತ್ತು. ಸಾಹೇಬರು ಅಂದರು.

"ನೋಡಿದಿರಾ, ಅವರು ಓಡಿಹೋದರೆಂದು ಕಂಡುಬರುತ್ತದೆ"

"ನೋಡೋಣ, ಬನ್ನಿ. ಒಂದು ವೇಳೆ ಓಡಿಹೋಗಿದ್ದರೆ ಸಾವೇನು ಮಾಡಲಾಗುತ್ತದೆ. ಅನಂತರ ಹುಡುಕುವುದು ಇದ್ದೇ ಇದೆಯಲ್ಲ"

ಪುನಃ ಹುಡುಕಿಕೊಂಡು ಹೋದಾಗ ನಿರಾಶೆಯಾಗಲಿಲ್ಲ ಲಾಲ್ ಬಾಗ್ ರಸ್ತೆಯಲ್ಲಿದ್ದ ಗಣೇಶ ಪಿಳ್ಳೆಯ ಮನೆಯ ದೀಪ ಹಚ್ಚಿತ್ತು.

ಹೋಗಿ ಬಾಗಿಲು ತಟ್ಟುತ್ತಲೇ ಗಣೇಶ ಪಿಳ್ಳೆ ಬಂದು ಬಾಗಿಲು ತೆಗೆದ. ಒಳಗೆ ಕರೆದುಕೊಂಡ ಹೋಗಿ ಕೂರಿಸಿದ.

ಅಷ್ಟು ಹೊತ್ತಿಗಾಗಲೇ ಹಜಾರದಲ್ಲಿ ಕುರ್ಚಿಯ ಮೇಲೆ ಮತ್ತೊಂದು ವ್ಯಕ್ತಿಯು ಕುಳಿತುಕೊಂಡಿತ್ತು. ಗಣೇಶ ಪಿಳ್ಳೆ ಕುಳಿತುಕೊಳ್ಳುವಂತೆ ಹೇಳಿದರೂ ಸಹ ಸಂಪತ್ ಮೊದಲೇ ಅಲ್ಲಿ ಬಂದು ಕುಳಿತುಕೊಂಡಿದ್ದ ಮತ್ತೊಂದು ವ್ಯಕ್ತಿಯನ್ನೇ ದುರುಗುಟ್ಟಿಕೊಂಡು ನೋಡುತ್ತಿದ್ದ.

ಎಲ್ಲರೂ ಕುಳಿತುಕೊಂಡನಂತರ "ಏನು ಬಂದಿರಿ ?" ಎಂದು ಕೇಳುವಂತೆ ಗಣೇಶ ಪಿಳ್ಳೆ ಇನ್ಸ್ಪೆಕ್ಟರ್ ಇಬ್ರಾಹಿಂ ಸಾಹೇಬರ ಕಡೆಗೆ ನೋಡಿದ.

"ಇವರನ್ನು ತಮಗೆ ಪರಿಚಯ ಮಾಡಿಸಿಕೊಡಬೇಕಾಗಿದೆ. ಇವರು ಮಿ॥ ಸಂಪತ್ ಅಂತ. ಈ ಊರಿನಲ್ಲಿ ಸುಪ್ರಸಿದ್ಧ ಖಾಸಗೀ ಪತ್ತೇದಾರರು"

"ಓಹೋ ! ಬಹಳ ಸಂತೋಷ. ನಮ್ಮ ಯಜಮಾನರ ಮರಣ ಸಂಬಂಧವಾದ ಪತ್ತೇ ತರದೂದಿನಲ್ಲಿ ತಾವು ಸಾಹೇಬರಿಗೆ ಸಹಾಯ ಮಾಡುತ್ತಿದ್ದೀರೆಂದು ಕಂಡುಬರುತ್ತದೆ"

ಆ ಮಾತಿಗೆ ಪ್ರತ್ಯುತ್ತರವಾಗಿ ಸಂಪತ್ ನಕ್ಕ.

"ಇವರು ಆ ಸಂಬಂಧವಾಗಿ ಕೆಲವು ವಿವರಗಳನ್ನು ಕೇಳಿ ತಿಳಿದುಕೊಳ್ಳಬೇಕೆಂದರು. ಅದಕ್ಕಾಗಿ ತಮ್ಮ ಬಳಿಗೆ ಬಂದೆವು. ಕಂಪನಿಯ ಬಾಗಿಲು ಹಾಕಿತ್ತು. ಅದರಿಂದ ಮನೆಯಲ್ಲಿರುತ್ತೀರೇನೋ ಎಂದು ಬಂದೆವು. ನೀವು ಮನೆಯಲ್ಲಿಯೇ ಇದ್ದಿರಿ"

"ಅಷ್ಟೇ, ಅಷ್ಟೇ. ಇನ್ನೆಲ್ಲಿ ತಾನೇ ಹೋಗುತ್ತೇನೆ. ಕಂಪನಿ, ಅದು ತಪ್ಪಿದರೆ ಮನೆ. ಅಷ್ಟೇ"

ಅಷ್ಟು ಹೊತ್ತೂ ಕುಳಿತಿದ್ದ ವ್ಯಕ್ತಿಯು ಎದ್ದು ನಿಂತುಕೊಂಡು ಹೇಳಿತು.

"ನೀವೇನೋ ಮಾತನಾಡಲು ಬಂದಿದ್ದೀರಿ. ನಾನು ಹೊರಡುತ್ತೇನೆ"

ಸಂಪತ್ ನಡುವೆ ಬಾಯಿ ಹಾಕಿ ಹೇಳಿದ.

''ನಾವು ಕುಳಿತುಕೊಳ್ಳಿ. ತಾವಿದ್ದರೇನಂತೆ ? ತಾವೇ ರಾಮಾನುಜಂ ರವರಲ್ಲವೇ ?"

ಆ ಮಾತು ಕೇಳಿ ರಾಮಾನುಜಂನ ಎದೆ ಜಗ್ಗೆಂದಿತು. ಈ ಪತ್ರೇದಾರನಿಗೆ ತನ್ನ ಹೆಸರು ಹೇಗೆ ಗೊತ್ತಾಯಿತು ? ಆದರೂ ಧೈರ್ಯ ತಂದುಕೊಂಡು ಕುಳಿತ.

ಸಂಪತ್‌ಗೆ ಸಹ ಗೊತ್ತಿರುವ ಈ ವ್ಯಕ್ತಿ ಯಾರೆಂದು ಸಾಹೇಬರು ವಿಸ್ಮಿತರಾದರು. ಆಗ ಪಿಳ್ಳೆ ಪರಿಚಯ ಮಾಡಿಸಿದ.

"ಇವರು ರಾಮಾನುಜಂ ಅಂತ. ನಮ್ಮ ಯಜಮಾನರು ಧರ್ಮರತ್ನಾಕರ ಬಾಬೂರಾಯರ ಸ್ನೇಹಿತರು. ಈ ಕಂಪನಿ ಮಾಡುವ ಪ್ಲಾನ್ ಇವರದೇ. ಇವರಿಗೂ ಯಜಮಾನರಿಗೂ ಸರಿಹೋಗದೇ ಬೇರೆಯಾದರು. ಆದರೂ ಕೆಲಸ ಕಾರ್ಯ ಹೇಗೆ ನಡೆಯುತ್ತಿದೆ ಎಂಬುದನ್ನು ವಿಚಾರಿಸಿಕೊಂಡು ಹೋಗಲು ಆಗಾಗ ಬರುತ್ತಿದ್ದರು. ಏನೋ ಈ ದಿನ ಹೀಗೇ ಬಂದವರು ಮಾತನಾಡುತ್ತಾ ಕುಳಿತುಕೊಂಡರು''

ಸಂಪತ್ ಅವನ ಕಡೆ ನೋಡಿ, ಅಂದ.

"ನೋಡಿದಿರಾ, ರಾಮಾನುಜಂ. ನೀವು ಈ ವ್ಯವಹಾರದಲ್ಲಿ ಬಹಳ ಮುಖ್ಯರಾದವರು. ಅಂತಹವರೇ ಹೊರಟು ಹೋಗುತ್ತಿದ್ದಿರಲ್ಲಾ''

ಮುಳ್ಳಿನ ಮೇಲೆ ಕುಳಿತಿರುವಂತಿತ್ತು, ರಾಮಾನುಜಂಗೆ. ಆದರೂ ಕುಳಿತುಕೊಂಡಿದ್ದ.

''ಮಿ॥ ರಾಮಾನುಜಂ. ನೀವೂ ಒಂದು ಕಾಲದಲ್ಲಿ ನಾಟಕದಲ್ಲಿ ಪಾರ್ಟು ಗೀರ್ಟು ಮಾಡುತ್ತಿದ್ದಿರಲ್ಲವೇ ?"

ರಾಮಾನುಜಂ ಈಗ ಸ್ವಲ್ಪ ಘಟ್ಟಿಯಾಗಿ ಉತ್ತರ ಹೇಳಿದ.

''ಹೌದು. ನಾನು ಪಾರ್ಟು ಮಾಡುತ್ತಿದ್ದುದು ನಿಜ. ಅದೇ ಸಂಬಂಧದಲ್ಲಿಯೇ ನನಗೂ ಬಾಬೂರಾಯರಿಗೂ ಪರಿಚಯವಿದ್ದದ್ದು. ಆದರೆ ಈಗ ನೀವು ಬಂದಿರುವ ವಿಷಯಕ್ಕೂ ನಾನು ಪಾರ್ಟು ಮಾಡುತ್ತಿದ್ದುದಕ್ಕೂ ಸಂಬಂ

ಧವಿಲ್ಲವೆಂದು ಕಂಡುಬರುತ್ತದೆ. ತಮ್ಮ ಕೆಲಸ ತಾವು ನೋಡಿಕೊಳ್ಳೋಣ ವಾಗಲಿ"

''ನನ್ನ ಕೆಲಸವನ್ನೇ ನಾನು ನೋಡಿಕೊಳ್ಳುತ್ತಿರುವುದು. ತಮಗೂ ನಮ್ಮ ಕೆಲಸಕ್ಕೂ ಸಂಬಂಧವಿಲ್ಲವೆಂದರೇನು ? ಈ ನಾಟಕದಲ್ಲಿ ತಮ್ಮದೇ ಪ್ರಧಾನವಾದ ಪಾತ್ರ"

ಇನ್ಸ್ಪೆಕ್ಟರ ಕಡೆ ತಿರುಗಿ ರಾಮಾನುಜಂ ಹೇಳಿದ.

"ಸಾಹೇಬರೇ ! ಇವರು ಅಕಾರಣವಾಗಿ ಏನೇನೋ ಮಾತನಾಡುತ್ತಿದ್ದಾರೆ. ತಮ್ಮ ಎದುರಿನಲ್ಲಿಯೇ ಇವರು ಹೀಗೆ ಮಾತನಾಡುತ್ತಿದ್ದರೆ ನೀವು ಸುಮ್ಮನಿರುವುದು ಚೆನ್ನಾಗಿರುವುದಿಲ್ಲ"

ಸಾಹೇಬರು ಮಾತನಾಡುವ ಮೊದಲು ಸಂಪತ್ತೇ ಹೇಳಿದ.

''ತಲಹರಟೆ ಮಾಡಬೇಡ. ಸುಮ್ಮನೇ ಕುಳಿತುಕೋ. ನೀನೇ ಅಲ್ಲವೇನಯ್ಯಾ, ಬ್ಯಾಂಕಿಗೆ ಹೋಗಿ ಎರಡು ಲಕ್ಷ ಎಪ್ಪತ್ತು ಸಾವಿರ ರೂಪಾಯಿ ಕ್ಯಾಷ್ ಮಾಡಿಕೊಂಡು ಬಂದುದು"

"ಆ—ಆ- ಏನೇನೋ ಹೇಳುತ್ತಿದ್ದೀರಿ. ಅದೆಲ್ಲಾ ಆಗುವುದಿಲ್ಲ. ಇನ್ಸ್ಪೆಕ್ಟರ್‌ರವರೇ ! ಇವರು ನನ್ನ ಮೇಲೆ ಏನೇನೋ ಆಪಾದನೆಗಳನ್ನು ಮಾಡುತ್ತಿದ್ದಾರೆ. ಅದಕ್ಕೆ ಏನು ಆಧಾರವಿದೆ ?"

"ಸ್ವಲ್ಪ ಆಧಾರ ಗೀಧಾರ ನೋಡಿಕೊಂಡು ಕೇಳಿ, ಸಂಪತ್ ಸ್ವಾಮಿ"

''ಹೂಂ. ಮಾತನಾಡಲು ಮೊದಲು ಏನು ಮಾತನಾಡುತ್ತೇನೆಂಬುದನ್ನು ನೋಡಿಕೊಂಡು ಮಾತನಾಡು."

"ಅದೆಲ್ಲಾ ಇರಲಿ. ನಾನು ಹೇಳುವುದನ್ನು ಕೇಳು. ಐದು ದಿನಗಳ ಹಿಂದೆ ನೀನು ಬ್ಯಾಂಕಿಗೆ ಹೋಗಿದ್ದೆ. ಮಾಮೂಲಾಗಿ ಬಾಬೂರಾಯರು ಹಾಕಿಕೊಳ್ಳುವಂತಹ ಬಟ್ಟೆಗಳನ್ನೇ ಹಾಕಿಕೊಂಡು ಹೋಗಿದ್ದೆ. ಜರೀಪಂಚೆ ಕರೀಕೋಟು, ಶಲ್ಯ- ಬೆಂಡಿನ ರುಮಾಲು. ನೀನೇ ಬಾಬೂರಾಯನೆಂದು ತಿಳಿದು ಬ್ಯಾಂಕ್ ಮ್ಯಾನೇಜರು ನಿನಗೆ ಹಣ ಕೊಟ್ಟುಬಿಟ್ಟರು."

ಜೋರಾಗಿ ನಗುತ್ತಾ ರಾಮಾನುಜಂ ಅಂದ.

''ಎಲ್ಲಿಯಾದರೂ ಉಂಟೇ ? ಎಲ್ಲಿಯಾದರೂ ಉಂಟೇ ? ಯಾರನ್ನೋ

ನೋಡಿ ಯಾರೋ ಎಂದುಕೊಂಡು ಬ್ಯಾಂಕಿನವರೆಲ್ಲಿಯಾದರೂ ಹಣ ಕೊಡುತ್ತಾರೆಯೇ ?"

"ಪಿಳ್ಳೆ ಹೋಗಿದ್ದರೆ ಅವರು ಕೊಡುತ್ತಿರಲಿಲ್ಲ. ಅದರಿಂದಲೇ ನೀನು ಹೋಗಿದ್ದುದು. ರಾಮಾನುಜಂ, ನಿನ್ನ ಮುಖ ಹೆಚ್ಚು ಕಡಿಮೆ ಬಾಬೂರಾಯರ ಮುಖದಂತೆಯೇ ಇದೆ. ಮೀಸೆಯೊಂದನ್ನು ಇಟ್ಟುಕೊಂಡರೆ ತೀರ್ ಅವರಂತೆಯೇ ಕಂಡುಬರುತ್ತೀ. ಅದರಿಂದಲೇ ಬ್ಯಾಂಕ್ ಮ್ಯಾನೇಜರು ನಿನ್ನನ್ನು ಬಾಬೂರಾಯ ಎಂದುಕೊಂಡರು."

ರಾಮಾನುಜಂ ಮಾತನಾಡುವುದರಲ್ಲಿ ಸಂಪತ್‌ನೇ ಹೇಳಿದ.

"ನಾನೂ ಬ್ಯಾಂಕ್ ಮ್ಯಾನೇಜರ್ ಬಳಿ ಹೋಗಿದ್ದೆ. ಅವರು ಹೇಳಿದರು. ನೀನು ಹಣ ತರಲು ಹೋಗಿದ್ದಾಗ 'ಕುಸುಮಶರ–ಸಮನೆನಿಪ........ ಮುಲುಗುತ್ತಿದ್ದೆಯಂತೆ. ಅವರು ಇದೇನು ಹಾಡು ಎಂದಾಗ ವರದಾಚಾರ್ಯರು ಹಾಡುತ್ತಿದ್ದರು – ಎಂದು ಹೇಳಿದೆಯಂತೆ. ಆಚಾರ್ಯರು 'ಕುಸುಮಶರ – ಸಮನೆನಿಪ...............' ಎಂದಾದರೂ ಹಾಡುತ್ತಿದ್ದರೆ ರಾಮಾನುಜಂ"

"ಏನು ಹಾಡುತ್ತಿದ್ದರೋ, ಏನು ಇಲ್ಲವೋ ನನಗೇನು ಗೊತ್ತು"

"ನಾನು ಹೇಳುತ್ತೇನೆ – ಕೇಳು. ಅವರು ಹಾಡುತ್ತಿರಲಿಲ್ಲ. ಅದು ಸಖಿಯರು ಹಾಡುತ್ತಿದ್ದ ಹಾಡು. ಬಾಬೂರಾಯರು ಯಾವಾಗಲೂ ಕೂನು ರಾಗ ಹಾಡುತ್ತಿದ್ದರೆಂಬುದನ್ನು ನೀನು, ಅವರ ವೇಷಧಾರಣೆ ಮಾಡಿಕೊಂಡಾಗ ಅದೇ ರೀತಿ ಹಾಡು ಹೇಳಿಕೊಂಡು ಕುಳಿತಿದ್ದೆ. ನಿನಗೆ ಗೊತ್ತಿಲ್ಲವೇನೋ, ಅಥವಾ ಗಾಬರಿಯಲ್ಲಿಯೇ 'ಕುಸುಮಶರ..........' ಆಚಾರ್ಯರು ಹಾಡುತ್ತಿದ್ದುದು – ಎಂದು ಹೇಳಿದೆ"

ಈ ಬಾರಿ ರಾಮಾನುಜಂ ಗಡುಸಾಗಿ ಅಂದ.

"ಇಂತಹ ಪ್ರಯೋಜನವಿಲ್ಲದ ಅಂಶಗಳಿಂದ ಭ್ರಾಂತರಾಗಿ ನನ್ನ ಮೇಲೆ ಇಲ್ಲಸಲ್ಲದ ಅಪವಾದಗಳನ್ನು ಹೊರಿಸುವುದು ಧರ್ಮವಲ್ಲ."

"ಧರ್ಮಾಧರ್ಮಗಳನ್ನು ಚೆನ್ನಾಗಿ ಬಲ್ಲವನು, ನೀನು. ಅಲ್ಲವೇ ? ಇನ್ನೂ ಹೇಳುತ್ತೇನೆ. ಕೇಳು. ಈ ಕೇಸು ನನ್ನ ಕೈಗೆ ಬಂದ ದಿನವೇ ಆ ದಿನ ಬ್ಯಾಂಕ್‌ಗೆ ಹೋಗಿ ಹಣ ತಂದವರು ಬಾಬೂರಾಯರಲ್ಲವೆಂದು ಊಹೆ

ಮಾಡಿದೆ. ಅದಿರಲಿ. ಬಹಳ ಚೆನ್ನಾಗಿ ಪ್ಲಾನ್ ಮಾಡಿದಿರಿ. ನೀವಿಬ್ಬರೂ ಸೇರಿ.”

ರಾಮಾನುಜಂ ಮತ್ತು ಗಣೇಶ ಪಿಳ್ಳೆ ಇಬ್ಬರೂ ಸಂಪತ್‌ನ ಮುಖ ನೋಡಿದರು.

“ಮೊದಲು ಬಾಬೂರಾಯರ ರುಜುವನ್ನು ಚೆಕ್ಕ್‌ನ ಎರಡು ಪಕ್ಕದಲ್ಲಿ ಯೂ ಫೋರ್ಜರೀ ಮಾಡಿಸಿದಿರಿ, ಅನಂತರ ಸೆಲ್ಫ್ ಎಂಬುದನ್ನೂ ಹಣವೆಷ್ಟೆಂಬುದನ್ನೂ ರಂಗನಾಯಿಕಿಯಿಂದ ಬರೆಸಿದಿರಿ. ಆ ರಂಗನಾಯಕಿ ಊರಿನಲ್ಲಿರಬಾರದೆಂದು ಅವಳನ್ನು ಹೈದರಾಬಾದಿಗೆ ಕಳುಹಿಸಿದಿರಿ ಅವಳನ್ನು ಹುಡುಕಿಕೊಂಡು ಈಗ ಪೋಲೀಸಿನವರು ಹೋಗಿದ್ದಾರೆ, ಎನ್ನು. ಅನಂತರ ಅವಳ ಅಣ್ಣ ಆರ್ಮುಗಂನಿಂದ ಬಾಬೂರಾಯರನ್ನು ಕೊಲೆ ಮಾಡಿಸಲು ಪ್ರಯತ್ನ ಮಾಡಿದಿರಿ. ಮೂರು ದಿನಗಳ ಹಿಂದೆ ಅವನು ನಾರ್ತ್ ರೋಡಿನಲ್ಲಿ ಮುದುಕನ ಮೇಲೆ ಕಾರು ಬಿಟ್ಟು ಕೊಲ್ಲುವುದಕ್ಕೆ ಪ್ರಯತ್ನ ಮಾಡಿದ. ಅದು ವಿಫಲವಾಗಲು ಅದೇ ರಾತ್ರಿ ಗಣೇಶ ಪಿಳ್ಳೆ ಆತನ ಮನೆಗೆ ಹೋದ. ಹಾಲಿಗೆ ಸಕ್ಕರೆ ನಾಲದೆಂದು ಹೇಳಿ ಆಶಾದೇವಿಯನ್ನು ಹೊರಗಡೆ ಕಳುಹಿಸಿ ಅವಳು ಕುಡಿಯುವ ಹಾಲಿಗೆ ನಿದ್ದೆ ಬರುವಂತಹ ಯಾವುದೋ ಪದಾರ್ಥ ಹಾಕಿದ. ಮುದುಕನ ಹಾಲಿಗೂ ಹಾಕಿದನೋ ಏನೋ ? ಆಶಾ ನಿದ್ದೆ ಮಾಡಲು ಹೋದ ನಂತರ ಆ ಕೋಣೆಗೆ ತೋಟದ ಕಡೆಯಿಂದ ಬರಬಹುದಾಗಿದ್ದ ಬಾಗಿಲನ್ನು ತೆಗೆದ. ತೂಗಟಿಕೆಯಲ್ಲಿದ್ದ ಮುದುಕ ಇದನ್ನು ಗಮನಿಸಲಿಲ್ಲವೆಂದು ಕಂಡುಬರುತ್ತದೆ. ಇದಿಷ್ಟೂ ಅಣಿ ಮಾಡಿ ಗಣೇಶಪಿಳ್ಳೆ ಬಂದುಬಿಟ್ಟ. ಮೊದಲೇ ಗೊತ್ತಾಗಿದ್ದ ಹಾಗೆ ಸ್ತ್ರೀ ವೇಷ ಧರಿಸಿ ಆರ್ಮುಗಂ ತೋಟದ ಬಾಗಿಲಿನಿಂದ ಒಳಗೆ ಬಂದ. ಮಗಳಿಗೆ ಚೆನ್ನಾಗಿ ನಿದ್ದೆ ಬಂದಿರುತ್ತದೆ. ಮುದುಕ ಮಲಗಿರುತ್ತಾನೆ. ಅಂತಹ ಸಮಯದಲ್ಲಿ ಬಂದ ಆರ್ಮುಗಂ ಸೈಯನೈಡ್ ಬಾಟಲು ತೆಗೆದು ಮುದುಕನ ಬಾಯಿ ಬಿಚ್ಚಿ ಕೆಲವು ಹರಳುಗಳನ್ನು ಹಾಕಿ ಸೀಸೆಗೆ ಬಿರಡೆಯನ್ನು ಹಾಕದೆ ಹಾಗೆಯೇ ಇಟ್ಟು ಹೊರಗೆ ಬಂದ. ನೋಡುವವರಿಗೆ ಮುದುಕ ಆತ್ಮಹತ್ಯೆ ಮಾಡಿಕೊಂಡನೆಂದು ನಂಬುವಂತಿತ್ತು ಆ ತರಹ. ರಾಮಾನುಜಂ, ನೀನು ಬಹಳ ಬುದ್ಧಿವಂತ. ನಿಜ. ಆದರೆ ಒಂದನ್ನು ಮಾತ್ರ ಗಮನಿಸಲಿಲ್ಲ. ಆತ್ಮಹತ್ಯೆ ಮಾಡಿಕೊಳ್ಳುವವನು ಬಿರಡೆ

ಮತ್ತು ಸೀಸೆಗಳ ಮೇಲಿನ ತನ್ನ ಕೈ ಬೆರಳ ಗುರ್ತುಗಳನ್ನು ಅಳಿಸುವುದಿಲ್ಲ. ಪೊಟಾಸಿಯಂ ಸೈನೇಡ್ ಸೀಸೆ ಅಥವಾ ಬಿರಡೆಗಳ ಮೇಲೆ ಯಾರ ಕೈ ಬೆರಳ ಗುರುತುಗಳೂ ಇರಲಿಲ್ಲ."

"ನೀವು ಹೇಳುವುದೊಂದೂ ನನಗೆ ಗೊತ್ತಿಲ್ಲ."

"ನಿನಗೆ ಗೊತ್ತಿರುವುದನ್ನೇ ಕೇಳುತ್ತೇವೆ, ರಾಮಾನುಜಂ. ನಾಟಕದ ವರಿಗೆ ಸಾಮಾನುಗಳನ್ನು ಕೊಡುತ್ತಾನೆಯಲ್ಲ, ಬುಳ್ಳಪ್ಪ ಅವನು ನಿನಗೆ ಗೊತ್ತೇ ?"

"ಚೆನ್ನಾಗಿ ಪರಿಚಯವಿಲ್ಲ. ಒಂದು ವೇಳೆ ಗೊತ್ತಿತ್ತು, ಅಂತಲೇ ಇಟ್ಟು ಕೊಳ್ಳಿ. ನಾನೂ ನಾಟಕಗಳಲ್ಲಿ ಪಾರ್ಟು ಮಾಡುತ್ತಿದ್ದವನು. ನಾಟಕ ಸಾಮಾನು ಕೊಡುವ ಬುಳ್ಳಪ್ಪ ನನಗೆ ಗೊತ್ತಿದ್ದರೆ ತಪ್ಪೇನು ?"

"ಸ್ವಲ್ಪ ತಡೆದುಕೋ. ಅವಸರ ಪಡಬೇಡ. ನೀನು ಎಂಟು ದಿನಗಳ ಹಿಂದೆ ಅವನಿಂದ ಜರೀ ಪಂಚೆ, ಪೇಟಾ, ಕರೀಕೋಟು, ಶಲ್ಯ,ಗಳನ್ನು ತರಿಸಿ ಕೊಂಡೆ. ಅವನ್ನು ಉಪಾಯವಾಗಿ ವಾಪ್ಸು ಕಳಿಸಿ ಬಿಟ್ಟೆ."

"ಸ್ವಲ್ಪ ಆಲೋಚನೆ ಮಾಡಿ ರಾಮಾನುಜಂ ಪ್ರಶ್ನಿಸಿದ.

"ಒಂದು ವೇರೆ ನಾನೇ ಬಾಬೂರಾಯರ ಹಾಗೆ ವೇಷ ಧರಿಸಿಕೊಳ್ಳ ಬೇಕಾಗಿದ್ದರೆ ಹೊಸಬಟ್ಟೆಗಳನ್ನೇ ಮಾಡುತ್ತಿದ್ದೆ. ಹಳೆದು ಯಾಕೆ ಬೇಕು?"

"ಅದಕ್ಕೂ ಕಾರಣವಿದೆ. ಎಲ್ಲಾ ಹೊಸದನ್ನೇ ಧರಿಸಿಕೊಂಡು ಹೋದರೆ ನಾರಣಯ್ಯರ್‌ಗೆ ವಿಚಿತ್ರವಾಗಿ ಕಾಣಬಹುದು. ಅಥವಾ ಅದು ಅನಂತರ ನಿನ್ನ ಮನೆಯಲ್ಲಿ ಸಿಕ್ಕಬಹುದು. ಕೆಲಸವಾದನಂತರ ಅದನ್ನು ನಾಶಮಾಡಿದರೂ ನಾಶಮಾಡಿದ ಕುರುಹುಗಳು ಕಂಡುಬರಬಹುದು. ಅದರ ಬದಲು ತರಿಸಿಕೊಂಡು ವಾಪ್ಸು ಮಾಡಿಬಿಟ್ಟೆ."

"ನೀವೆಲ್ಲಾ ಕತೆ ಕಟ್ಟುತ್ತಿದ್ದೀರಿ, ಸ್ವಾಮಿ."

ರಾಮಾನುಜಂ ಎದ್ದುನಿಂತೇ ಜೇಬಿನಿಂದ ಪ್ಯಾಕು, ಬೆಂಕೀಪಟ್ಟಣಗ ಳನ್ನು ತೆಗೆದು ಸಿಗರೇಟು ಹಚ್ಚಿಕೊಂಡ.

"ಈ ಕೇಸು ನನ್ನ ಕೈಗೆ ಬಂದ ದಿನವೇ ಬ್ಯಾಂಕಿಗೆ ಹೋಗಿ ಹಣ ತಂದ ವರು ಬಾಬೂರಾಯರಲ್ಲವೆಂದು ನನಗೆ ತೋರಿತು – ಎಂದು ಹೇಳಿದೆನಲ್ಲಾ, ಅದೇ ದಿನ ಇಂತಹ ಬಟ್ಟೆಗಳು ಬಾಡಿಗೆಗೆ ಎಲ್ಲಿ ಸಿಕ್ಕುತ್ತದೆಂದು ವಿಚಾರಿಸಿದ್ದೆ.

ಎಲ್ಲ ಕಡೆಯೂ ಹುಡುಕಿದಂತೆ ಬುಳ್ಳಪ್ಪನ ಅಂಗಡಿಯಲ್ಲಿಯೂ ಹುಡುಕಿಸಿದೆ. ಬುಳ್ಳಪ್ಪನ ಅಂಗಡಿಯಲ್ಲಿದ್ದ ಕರೀ ಲಾಂಗ್ ಕೋಟಿನ ಮೇಲೆ ಕೈ ಬೆರಳ ಗುರುಗಳಿದ್ದವು. ಅದರ ಫೋಟೋಗಳನ್ನು ತೆಗೆದಿಟ್ಟಿದೆ. ನಡೀ. ಈಗ ಪೋಲೀಸ್ ಸ್ಟೇಷನ್ನಿಗೆ ಹೋಗಿ ನನ್ನ ಕೈ ಬೆರಳ ಗುರುತುಗಳನ್ನೂ ಆ ಫೋಟೋದಲ್ಲಿರುವ ಕೈ ಬೆರಳ ಗುರುತುಗಳನ್ನೂ ಹೋಲಿಸಿ ನೋಡೋಣ."

ರಾಮಾನುಜಂನ ಧೈರ್ಯವು ಗಳಿಗೆ ಗಳಿಗೆಗೂ ಕುಸಿಯುತ್ತಿತ್ತು. ಆದರೆ ಈ ಕಟ್ಟಕಡೆಯ ಗಳಿಗೆಯಲ್ಲಿ ಅವನಿಗೆ ಎಲ್ಲಿಲ್ಲದ ಧೈರ್ಯವು ಬಂದಿತು. ಸೇದುತ್ತಿದ್ದ ಸಿಗರೇಟು ಕೆಳಗೆ ಹಾಕಿ ತಟ್ಟನೆ ಜೇಬಿಗೆ ಕೈ ಹಾಕಿ ಪಿಸ್ತೂಲು ತೆಗೆದು ಕುಳಿತಿದ್ದ ಪತ್ತೇದಾರನಿಗೂ ಇನ್ಸ್‌ಪೆಕ್ಟರಿಗೂ ತೋರಿಸಿದನು. ಅವರೇನು ಮಾಡುವುದೆಂದು ನಿರ್ಧರಿಸುವುದರೊಳಗಾಗಿ ಬಾಗಿಲು ಹಾಕಿಕೊಂಡು ಹೊರಟುಹೋದ.

ಇಬ್ರಾಹಿಂ ಸಾಹೇಬರು ಗಣೇಶ ಪಿಳ್ಳೆಯನ್ನು ಕಾದು ಅಲ್ಲಿಯೇ ನಿಂತುಕೊಂಡರು. ಸಂಪತ್ ನೋಡಿಕೊಂಡು ಬಂದು ಹೇಳಿದ.

"ಅವನು ಹಿತ್ತಲ ಬಾಗಿಲಿನಿಂದ ಹೊರಟುಹೋದ."

"ಹಾಗಾದರೆ ಈಗೇನು ಮಾಡುವುದು ?"

''ನೋಡೋಣವಂತೆ. ಮೊದಲು ಇವನನ್ನು ಬಂದೋಬಸ್ತು ಮಾಡಿ ಅನಂತರ ಅವನನ್ನು ನೋಡೋಣ."

ಸಂಪತ್‌ನ ಸಲಹೆಯಂತೆಯೇ ಗಣೇಶನ ಕೈ ಕಾಲುಗಳನ್ನು ಕಟ್ಟಿ, ಬಾಯಿಗೆ ಬಟ್ಟೆ ತುರುಕಿ,ಕೋಣೆಯಲ್ಲಿ ಕೂಡಿ, ಮನೆಯ ಬೀಗ ಹಾಕಿಕೊಂಡು ಹೊರಟರು.

ಸ್ವಿಮಿಂಗ್ ಪೂಲ್ ಎಕ್ಸ್‌ಟೆನ್ಷನ ಒಂದು ಮನೆಯ ಬಳಿ ಬರುವ ವೇಳೆಗೆ ಕತ್ತಲಾಗಿತ್ತು. ದೂರದಲ್ಲಿಯೇ ಕಾರು ನಿಲ್ಲಿಸಿ ನಡೆದುಕೊಂಡು ಬಂದವರ ಬಳಿಗೆ ಸುಂದರ್ ಬಂದು ಹೇಳಿದ.

"ಆಸಾಮಿ ಬಂದು ಸ್ವಲ್ಪ ಹೊತ್ತಾಯಿತು. ಮನೆಯೊಳಗಿದ್ದಾನೆ."

"ಇರಲಿ ಮರೆಯಲ್ಲಿ ನಿಂತುಕೊಳ್ಳೋಣ, ಬಾ.''

ಮರೆಯಲ್ಲಿ ನಿಂತುಕೊಂಡನಂತರ ಸಾಹೇಬರು ದಿಗ್ಭ್ರಾಂತರಾಗಿ ಸಂಪತ್‌ನ ಕಡೆ ನೋಡಿದರು.

"ವೈಯ್ಯಾಳೀ ಕಾವಲ್ ಕಂಪನಿಗೆ ಬಂದು ಹೋಗುತ್ತಿದ್ದ ರಾಮಾನುಜಂನನ್ನು ಮೊನ್ನೆಯೇ ಸುಂದರ್ ಗಮನಿಸಿದ. ಅವನ ಮನೆಯನ್ನೂ ಪಿಳ್ಳೆಯ ಮನೆಯನ್ನೂ ಕಂಡುಹಿಡಿದ. ರಾಮಾನುಜಂ ಓಡಿ ಹೋದನಂತರ ಅವನು ಇಲ್ಲಿಗೆ ಬರುತ್ತಾನೆಂದೇ ಧೈರ್ಯವಾಗಿದ್ದೆ. ಗಣೇಶ ಪಿಳ್ಳೆಯನ್ನು ನೋಡಲು ಹೋಗುವಾಗ ರಾಮಾನುಜಂನ ಮೇಲೆ ನಿಗಾ ಇಡಲೆಂದು ಸುಂದರನನ್ನು ಇಲ್ಲಿಗೆ ಕಳುಹಿಸಿದ್ದೆ."

ಸ್ವಲ್ಪ ಹೊತ್ತಿನಲ್ಲಿಯೇ ಮನೆಯ ಬಾಗಿಲು ತೆಗೆದುಕೊಂಡು ಐರೋಪ್ಯ ವೇಷ ಧಾರಿಯೊಬ್ಬನು ಹೊರಗಡೆ ಬಂದ. ಮನೆಗೆ ಬೀಗ ಹಾಕಿಕೊಂಡು ಜಗುಲಿಯಿಂದ ಇಳಿದ. ಮರೆಯಲ್ಲಿದ್ದವರು ನೋಡಿದರು.

ಕರಿಯ ಸೂಟು ಹಾಕಿಕೊಂಡಿದ್ದ. ಕಾಲಿಗೆ ಅದೇ ಬಣ್ಣದ ಬೂಡ್ಸು. ತಲೆಗೆ ಹಳೆಯ ಈವ್‌ನಿಂಗ್ ಹ್ಯಾಟು. ಎಡಗೈಯ್ಯಲ್ಲಿ ಸಣ್ಣ ಸೂಟು ಕೇಸು. ಬಲಗೈಯ್ಯಲ್ಲಿ ವಾಕಿಂಗ್ ಸ್ಟಿಕ್. ಬಾಯಲ್ಲಿ ಹೊಗೆಯುಗುಳುತ್ತಿರುವ ಚುಟ್ಟಾ. ಮುಖವೆಲ್ಲಾ ಕಪ್ಪಗಿದೆ. ಮೂಗಿನ ಕೆಳಗೆ ಹಿಟ್ಲರ್ ಮೀಸೆಯಿದೆ.

ಸಂಪತ್ ಹೇಳಿದ.

"ಆ ಕರಿಯ ದೊರೆಯೇ ರಾಮಾನುಜಂ. ಹುಷಾರಾಗಿರಬೇಕು. ತಪ್ಪಿಸಿಕೊಂಡು ಹೋಗದಂತೆ ಹಿಡಿಯಬೇಕು"

ಸುಂದರ್ ಮತ್ತು ಇಬ್ರಾಹಿಂ ಸಾಹೇಬರು ಪಿಸ್ತೂಲುಗಳನ್ನು ತೆಗೆದುಕೊಂಡು ಅವನ ಮುಂದೆ ಹೋಗಿ ನಿಂತು ತಡೆದರು. ಕರೀ ದೊರೆ ಹಿಂತಿರುಗಿ ನೋಡಿದ. ಸಂಪತ್ ನಿಂತಿದ್ದ. ಅವನ ಕೈಯ್ಯಲ್ಲಿ ಪಿಸ್ತೂಲು ಇತ್ತು.

"ಸಾಹೇಬರೇ ! ರಾಮಾನುಜಂ ಕೈಯ್ಯಲ್ಲಿರುವ ಸೂಟುಕೇಸು ತೆಗೆದು ಹುಷಾರಾಗಿಟ್ಟುಕೊಳ್ಳಿ. ಅದರಲ್ಲಿ ವೈಯ್ಯಾಳೀ ಕಾವಲ್ ಕಂಪನಿಯ ಲಕ್ಷಾಂತರ ರೂಪಾಯಿಗಳಿರಬಹುದು"

ಸಾಹೇಬರು ಹಾಗೆಯೇ ಮಾಡಿದರು.

ಕಾರಿನಲ್ಲಿ ರಾಮಾನುಜಂನನ್ನು ಹಿಂದಿನ ಸೀಟಿನಲ್ಲಿ ಕುಳ್ಳಿರಿಸಿದರು. ಒಂದು ಕಡೆ ಸುಂದರ್‌ನೂ ಮತ್ತೊಂದು ಕಡೆ ಸಾಹೇಬರೂ ಕುಳಿತರು. ಸಂಪತ್ ಕರೀ ದೊರೆಯ ಜೇಬುಗಳನ್ನೆಲ್ಲಾ ಹುಡುಕಿ ಷರಾಯಿ ಜೇಬಿನಲ್ಲಿದ್ದ

ಪಿಸ್ತೂಲು ತೆಗೆದು ತನ್ನ ಜೇಬಿನಲ್ಲಿ ಹಾಕಿಕೊಂಡು ಸೆಂಟ್ರಲ್ ಪೋಲೀಸ್ ಸ್ಟೇಷನ್ ಕಡೆ ಕಾರುಬಿಟ್ಟ.

# ೧೮

ಇಬ್ರಾಹಿಂ ಸಾಹೇಬರು ಗಡ್ಡ ನೀವಿಕೊಳ್ಳುತ್ತಾ ಹೇಳಿದರು.

"ಅರಸರು ನಿಮ್ಮನ್ನು ಬಹಳ ಪಸಂದ್ ಮಾಡಿದರು, ಸಂಪತ್ ಸಾಮಿ"

"ಪಸಂದ್ ಮಾಡದೇ ಏನು ಮಾಡುತ್ತಾರೆ ? ನ್ಯಾಯವಾಗಿ ನೋಡಿದರೆ ನನಗೆ ಚೀಫ್ ಡಿಟೆಕ್ಟಿವ್ ಕೆಲಸ ಕೊಡಬೇಕು"

"ಅದೂ ಹೇಳಿದರು. "ನಾನು ಸಂಪತ್‌ಗೆ ಚೀಫ್ ಡಿಟೆಕ್ಟಿವ್ ಕೆಲಸವೇ ಕೊಡಿಸುತ್ತಿದ್ದೆ. ಆದರೆ ಅವನು ಪತ್ತೇ ತರದೂದು ಮಾಡುವಂತೆ ಮಾಡಿದರೆ ಕೆಲಸದಿಂದ ಡಿಸ್‌ಮಿಸ್ ಆಗುತ್ತದೆ. ಡಿಸ್‌ಮಿಸ್ ಆಗುವಂತಹ ಕೆಲಸ ಕೊಡಿಸುವ ಬದಲು ಕೊಡಿಸದಿರುವುದೇ ಒಳ್ಳೆಯದು ಎಂದರು."

ನಡುವೆ ಸೀತಮ್ಮ ಬಾಯಿ ಹಾಕಿ ಹೇಳಿದರು.

"ಕೆಲಸವೂ ಬೇಡ, ಗಿಲಸವೂ ಬೇಡ. ಈಗ ಮಾಡಿದ ಕೆಲಸಕ್ಕೆ ಏನಾದರೂ ನಮ್ಮ ಯಜಮಾನರಿಗೆ ಗಿಟ್ಟುತ್ತದೆಯೋ, ಸಾಹೇಬರೇ !"

"ಗಿಟ್ಟಬಹುದಮ್ಮಾ. ಆ ದೇವಿಯೂ ಆನಂದ ರಾಯರೂ ಬಹಳ ಸ್ನೇಹವಾಗಿರುವಂತಿದೆ. ಅವರೇನಾದರೂ ಮದುವೆ ಮಾಡಿಕೊಂಡರೆ ನಿಮ್ಮಲ್ಲಿ ದಂಪತಿ ಪೂಜೆಯೋ ಏನೋ ಮಾಡುತ್ತಾರಲ್ಲಾ ಅದು ಮಾಡಿ, ನಿಮಗೆ ಸೀರೇ, ಸ್ವಾಮಿಯವರಿಗೆ ಪಂಚೆ ಕೊಡಬಹುದು"

"ಅದಾರೋ ಒಬ್ಬ ಹುಡುಗಿ ಆನಂದರಾಯರಿಗೆ ಗಂಟು ಬಿದ್ದಿದ್ದಳಲ್ಲವೇ ?"

"ಬಿದ್ದಿದ್ದಳಮ್ಮಾ, ವಿಮಲಾ ಅಂತ. ನಮ್ಮ ಸ್ವಾಮಿಯವರು ಏನೇನೋ ಹೇಳಿ ಅವಳ ಮೇಲೆ ಆನಂದರಾಯರಿಗೆ ಖಯಾಲೀ ಬಿಟ್ಟುಹೋಯಿತು"

"ಹೋಗಲಿ, ಬಿಡಿ. ಎಲ್ಲಿಯಾದರೂ ಚೆನ್ನಾಗಿರಲಿ"

"ನೀವು ಯೋಚನೆ ಮಾಡಬೇಡಿರಮ್ಮಾ. ನಮ್ಮ ಅಮ್ಮಾವರಿಗೆ ಕೊಡುವ ಸೀರೆ ಕಲಾಪತ್ತಿನ ಸೀರೆಯೇ ಆಗಿರಬೇಕೆಂದು ನಾನು ಹಟ ಹಿಡಿಯುತ್ತೇನೆ"